

# ದೇಶಾಂಶ ಹುಡಗಿ ಅವರ ಸಮಗ್ರ ಸಾಹಿತ್ಯ ಒಂದು ಅಧ್ಯಯನ

( ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ. ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ )


ಸಂಶೋಧಕರು

**ಜಗದೇವಿ ತಂದೆ ಶಿವರಾಜ**

ಸಂಶೋಧನ ಮಾರ್ಗದರ್ಶಕರು

**ಡಾ. ಸೋಮನಾಥ ಯಾಳವಾರ**

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ,

ಬೀದರ







**ವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬**

**ಸೆಪ್ಟೆಂಬರ - ೨೦೦೮**



# ದೇಶಾಂಶ ಹುಡಗಿ ಅವರ ಸಮಗ್ರ ಸಾಹಿತ್ಯ ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)




ಸಂಶೋಧಕರು

**ಜಗದೇವಿ ತಂದೆ ಶಿವರಾಜ**

ಸಂಶೋಧನ ಮಾರ್ಗದರ್ಶಕರು

**ಡಾ. ಸೋಮನಾಥ ಯಳವಾರ**

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ
ಬೀದರ.






ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ –೫೮೩ ೨೭೬.

ಸೆಪ್ಟೆಂಬರ್–೨೦೦೮.

# ಪ್ರಮಾಣ ಪತ್ರ

ಶ್ರೀ ದೇಶಾಂಶ ಹುಡುಗಿ ಅವರ ಸಮಗ್ರ ಸಾಹಿತ್ಯ ಒಂದು ಅಧ್ಯಯನ ಎಂಬ ನಿಬಂಧವನ್ನು ಡಾ. ಸೋಮನಾಥ ಯಳವಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫೀಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Jagadevi

ಜಗದೇವಿ ತಂದೆ ಶಿವರಾಜ

ಎಂ.ಫೀಲ್. ವಿದ್ಯಾರ್ಥಿನಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನಾ ಕೇಂದ್ರ

ಬೀದರ.

ಸ್ಥಳಃ ಬೀದರ

ದಿನಾಂಕಃ 15-09-2008.

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀಮತಿ ಜಗದೇವಿ ತಂದೆ ಶಿವರಾಜ ಇವರು ನನ್ನ ಮಾರ್ಗದರ್ಶನದಲ್ಲಿ "ಶ್ರೀ ದೇಶಾಂಶ ಹುಡಗಿಯವರ ಸಮಗ್ರ ಸಾಹಿತ್ಯ: ಒಂದು ಅಧ್ಯಯನ" ಎಂಬ ವಿಷಯ ಕುರಿತು ನಿಬಂಧನೆವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫೀಲ್. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಸೋಮನಾಥ ಯಳವಾರ
ಎಂ.ಎ. ಕನ್ನಡ ಡಿಪ್ಲೊಮಾ (ಭಾಷಾವಿಜ್ಞಾನ)
ಪಿ.ಎಚ್.ಡಿ. (ಕನ್ನಡ) ಪ್ರಾಧ್ಯಾಪಕರು ಹಾಗೂ
ಮುಖ್ಯಸ್ಥರು ಕನ್ನಡ ವಿಭಾಗ
ಕ.ರಾ.ಶಿ. ಸಂಸ್ಥೆಯ
ಸ್ನಾತೋಕತ್ತರ ಕನ್ನಡ ಸಂಶೋಧನೆ ಬೀದರ.

ಸ್ಥಳ: ಬೀದರ

ದಿನಾಂಕ: 15-09-2008

# ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕರ್ನಾಟಕದಲ್ಲಿ ವಿಪುಲವಾಗಿ ಸಾಹಿತ್ಯದ ಚರ್ಚೆಯಾಗುತ್ತಿದ್ದರೂ ಪರಿಣಾಮಕಾರಿಯಾಗಿ ಚರ್ಚೆಯಾಗದ ಸಂಗತಿಯೆಂದರೆ ಬೀದರ ಜಿಲ್ಲೆಯ ಸಾಹಿತ್ಯ ಹಲವು ದೃಷ್ಟಿಗಳಲ್ಲಿ ತನ್ನದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿ ನಿಂತಿರುವ 'ಬೀದರ' ಜಿಲ್ಲೆ ವಿಶಿಷ್ಟವೆನಿಸಿದೆ. ಕರ್ನಾಟಕ ತಲೆ, ಕಿರೀಟ, ಧರಿನಾಡು, ಕೆಂಪು ಭೂಮಿ ಎಂದೆಲ್ಲ ಹೇಳಲಾಗುವ ಈ ನೆಲದಲ್ಲಿ ಕ್ರಿ.ಶ. ೮ ನೆಯ ಶತಮಾನದಿಂದಲೆ ಕನ್ನಡದಲ್ಲಿ ಸಾಹಿತ್ಯ ರಚನೆಯಾದದ್ದು ಕಂಡು ಬರುತ್ತದೆ. ಕಾರಂಜಾ, ಮಾಂಜಿರಾ ನದಿಗಳ ಈ ಪ್ರದೇಶವು ಫಲವತ್ತಾಗಿದ್ದು, ಕಲ್ಯಾಣ ಚಾಲುಕ್ಯರು ಹಾಗೂ ಬಹಮನಿ ಅರಸರ ರಾಜಧಾನಿಯೂ ಆಗಿ ಮೆರೆದಿದೆ. ಧರ್ಮ, ತತ್ವ, ಸಿದ್ಧಾಂತ ಹಾಗೂ ಕಲೆಗಳ ಸಂಗಮ ಸ್ಥಾನವಾಗಿರುವ ಈ ಜಿಲ್ಲೆಯಲ್ಲಿ ವೈವಿಧ್ಯಮಯ ಸಾಂಸ್ಕೃತಿಕ ಜನವಸತಿಯಿದೆ.

ಜಗತ್ಪ್ರಸಿದ್ಧ "ಬಿದ್ರಿ" ಕಲೆಯ ಹೆಸರಿನೊಂದಿಗೆ ಗುರುತಿಸಿಕೊಳ್ಳುವ ಬೀದರ ಕರ್ನಾಟಕದ ಉತ್ತರ ತುದಿಯಲ್ಲಿದೆ. ೫೪೧ ಹಳ್ಳಿಗಳನ್ನು ಹೊಂದಿರುವ ಜಿಲ್ಲೆಯು ಸಮುದ್ರ ಮಟ್ಟದಿಂದ ಸು. ೨೩೦೯ ಅಡಿ ಎತ್ತರದಲ್ಲಿದೆ. ಸಮಶೀತೋಷ್ಣ ಹವಾಮಾನವಿರುವ ಇದು ಆರೋಗ್ಯ ಪೂರ್ಣ ತಾಣವೆನಿಸಿದ್ದು, ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ಪಡೆದಿದೆ. ಸಾಮ್ರಾಟ ಮೌರ್ಯರಿಂದ ಆರಂಭಿಸಿ, ಶಾತವಾಹನ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯರು, ಕಳಚೂರಿಗಳು, ಕಾಕತೀಯರು, ಖಿಲ್ಜಿ, ಬಹಮನಿ, ಮೊಘಲ ಹಾಗೂ ಹೈದ್ರಾಬಾದ ನಿಜಾಂ ಶಾಹಿ ಅರಸರು ಇಲ್ಲಿ ಆಳಿ ಹೋಗಿದ್ದಾರೆ. ಆಧ್ಯಾತ್ಮಿಕವಾಗಿಯೂ ಅಪಾರವಾದ ಕೊಡುಗೆ ನೀಡಿರುವ ಈ ಜಿಲ್ಲೆಯಲ್ಲಿ ಬೌದ್ಧ, ಜೈನ, ಶೈವ – ವೀರಶೈವ, ವೈದಿಕ, ಆರ್ಯ ಹಾಗೂ ಶಿಖ್ ಧರ್ಮದ ಅನುಯಾಯಿಗಳು ಅಪಾರ ಸಂಖ್ಯೆಯಲ್ಲಿ ವಾಸವಾಗಿದ್ದು, ಸಾಹಿತ್ಯ, ಸಂಗೀತ, ಶಿಲ್ಪ ವಾಸ್ತು ಶಿಲ್ಪಕ್ಕೆ ಇವರು ತಮ್ಮದೇ ಆದ ಕಾಣಿಕೆಯಿತ್ತಿದ್ದಾರೆ. ಸಾಹಿತ್ಯಕ್ಕೆ ಇಲ್ಲಿಯ ಶರಣರ ಕೊಡುಗೆ ಅನನ್ಯವೆನಿಸಿದೆ. ಈ ಜಿಲ್ಲೆಯ ಸಾಂಸ್ಕೃತಿಕ ಪರಂಪರೆಯ ಉಸಿರಿನಂತಿರುವ ಸಾಹಿತ್ಯ ಕ್ಷೇತ್ರ ಪ್ರಾಚೀನ ಕಾಲದಿಂದ ಸಂಪದ್ಭರಿತವಾಗಿದೆ. '೧೨ ನೆಯ ಶತಮಾನ ಕನ್ನಡ ಸಾಹಿತ್ಯದ ಸುಗ್ಗಿಯ ಕಾಲ. ಈ

ಜಿಲ್ಲೆಯ ಕಾಣಿಕೆಯಾಗಿರುವ 'ವಚನ ವಾಙ್ಮಯ'ವು ವಿಶ್ವ ಸಾಹಿತ್ಯಕ್ಕೆ ಕೊಟ್ಟ ಮಹಾನ್ ಕೊಡುಗೆ[1]' ಎಂಬ ಮಾತು ಗಮನಾರ್ಹವಾಗಿದೆ.

ವಿಜ್ಞಾನೇಶ್ವರನ 'ಮಿತಾಕ್ಷರ', ಬಿಲ್ಹಣನ 'ವಿಕ್ರಮಾಂಕದೇವ' ಸುಲ್ತಾನರ ಕಾಲದ ಆಧರಿಯ 'ಬಹುಮನ್ ನಾಮಾ' ಮೊದಲಾದ ಕೃತಗಳು ಹುಟ್ಟಿದ ಈ ನಾಡಿನಲ್ಲಿ ತತ್ವಪದಕಾರರು, ಸ್ವರವಚನಕಾರರು, ಕವಿಗಳು ಕಲಾವಿದರು ನೂರಾರು ಸಂಖ್ಯೆಯಲ್ಲಿ ಜನ್ಮವೆತ್ತಿದ್ದಾರೆ. ತೆಲುಗು, ಉರ್ದು, ಮರಾಠಿ, ಹಿಂದೀ ಹಾಗೂ ಇಂಗ್ಲೀಷ ಭಾಷೆಯ ಪ್ರಭಾವಕ್ಕೊಳಪಟ್ಟ ಇಲ್ಲಿಯ ಭಾಷಾ ವೈಖರಿಯು ವಿಶಿಷ್ಟವಾಗಿದೆ. ಇದನ್ನೆಲ್ಲ ಅರಗಿಸಿಕೊಂಡು ಬದುಕಿ ಬಾಳಿದವರು ಶ್ರೀ ದೇವರಾಯ ಶಾಂತಪ್ಪ ಹುಡುಗಿಯವರು. ಸಾಹಿತ್ಯ ಜನಪರವಾಗುತ್ತಿರುವ ಇಂದಿನ ಸಂದರ್ಭದಲ್ಲಿ ಬದುಕು-ಬರಹಗಳ ಸಾವಯವ ಸಂಬಂಧ ಹೊಂದಿರುವ ಅವರ ಕುರಿತಾಗಿ ಸಮಗ್ರ ಅಧ್ಯಯನ ನಡೆಯಬೇಕಾಗಿರುವುದು ಇಂದು ಅವಶ್ಯವೆನಿಸುತ್ತದೆ.

'ದೇಶಾಂಶ' ಹುಡುಗಿಯವರು ಸ್ವಾತಂತ್ರ್ಯ ಪೂರ್ವದಿಂದಲೂ ಅನೇಕ ವೈರುಧ್ಯಗಳ ಮಧ್ಯೆ ಹಿಡಿದ ಛಲ ಬಿಡದೆಮುನ್ನಡೆದ ಲೇಖಕರೆನಿಸಿದ್ದಾರೆ. ಕನ್ನಡ ಕಾವ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಅವರು ಬೀದರ ಜಿಲ್ಲೆಯ ಪ್ರಮುಖ ಕವಿ ಎನಿಸಿ ಬದುಕಿದ್ದಾರೆ. ಕಳೆದ ೨-೩ ದಶಕಗಳಿಂದ ಕಾವ್ಯ ರಚನೆಗೆ ತೊಡಗಿರುವ ಅವರು, ಧರಿನಾಡಿನ ಧ್ವನಿಯಾಗಿ ನಿಂತಿದ್ದಾರೆ. ಅಪ್ಪಟ ಕನ್ನಡ ಕಟ್ಟಾಳು ಆಗಿರುವ ಇವರ ಬದುಕು-ಬರಹಗಳು ಮುಂಬರುವ ಜನಾಂಗಕ್ಕೆ ದಾರಿದೀಪವಾಗಿ ನಿಲ್ಲಲಿದ್ದು ಅಧ್ಯಯನ ಯೋಗ್ಯವಾಗಿವೆ.

ದೇವರಾಯ ಶಾಂತಪ್ಪ ಶರಣಪ್ಪನವರ ಶೈಕ್ಷಣಿಕ ಬದುಕಿನ ವಿಕಾಸವು ಕುತೂಹಲಕಾರಿಯಾಗಿದ್ದು, ಕನ್ನಡ ಕವಿಯಾಗಿ ಬೆಳೆದದ್ದು ಅಪರೂಪವೆನಿಸುತ್ತದೆ. ಐದನೆಯ ವರ್ಗದವರೆಗೆ ಕನ್ನಡ, ಮರಾಠಿ, ಮೋಡಿಲಿಪಿಯ ಅಭ್ಯಾಸ, ೬ ನೆಯ ವರ್ಗವನ್ನು ಓದಿದ್ದು, ಉರ್ದು ಮಾಧ್ಯಮದಲ್ಲಿ ೭ ನೆಯ ಇತ್ತೆಯನ್ನು ಮರಾಠಿ ಮಾಧ್ಯಮದಲ್ಲಿ ಅಭ್ಯಾಸಿಸಿದರು. ಒಂದೇ ಊರಲ್ಲಿಯೂ ಅವರ ವಿದ್ಯಾಭ್ಯಾಸವಾಗಲಿಲ್ಲ. ಹುಡಗಿ, ಚಿಟಗುಪ್ಪಾ, ಸೇಡಂ ಹೈದ್ರಾಬಾದ ದಲ್ಲಿ ಅವರ ಶಿಕ್ಷಣ ನಡೆಯಿತು. ಎಚ್.ಎಸ್.ಸಿ. ವರೆಗಿನ ಅವರ ಶಿಕ್ಷಣವು ಅವರಿಗೆ ಹಲವು ತೆರದ ಬದುಕಿನ ಸಂಪರ್ಕವನ್ನು ತಂದೊಡ್ಡಿತು. ಅದೇ ಜ್ಞಾನ ಅವರ ಸಾಹಿತ್ಯ ಕೃಷಿಗೆ ಪೋಷಣೆಯಿತ್ತು ಬೆಳೆಸಿತು. ಇಂದಿನ ಹಲವು ಸಮಸ್ಯೆಗಳ ಮಧ್ಯೆದಲ್ಲಿ ದೃಢ

---

[1] ಡಾ. ಸೋಮನಾಥ ಯಾಳವಾರ ಬೀದರ ಜಿಲ್ಲಾ ದರ್ಶನ-೨೦೦೫ ಪು-೧೦.

ಸಂಕಲ್ಪದಿಂದ, ಸಾಹಿತ್ಯ ಕೃಷಿಯಲ್ಲಿ ಶೈಕ್ಷಣಿಕ ವಾತಾವರಣವನ್ನು ತಂದು ತೋರಿಸಿದ 'ದೇಶಾಂಶ' ಅಂತಹ ಲೇಖಕರು ವಿರಳವೆನಿಸುತ್ತಾರೆ.

ಬೀದರ ಜಿಲ್ಲೆ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆ ಎಂದು ಸ್ವಾತಂತ್ರಾನಂತರದಲ್ಲಿ ಗುರುತಿಸಲಾಯಿತು. ರಾಜ್ಯ ಮಟ್ಟಕ್ಕೆ ಹೋಲಿಸಿದರೆ ಇತರ ಜಿಲ್ಲೆಗಳಿಗಿಂತ ಇಲ್ಲಿಯ ಸಾಕ್ಷರತಾ ಪ್ರಮಾಣವು ತುಂಬಾ ಕಡಿಮೆಯಾಗಿತ್ತು. ಇದನ್ನು ಅನುಲಕ್ಷಿಸಿದ ದೇಶಾಂಶರು ಒಬ್ಬ ಶಿಕ್ಷಕರಾಗಿದ್ದುಕೊಂಡು ೧೯೯೨ ರಿಂದ ೧೯೯೫ ರ ವರೆಗಿನ ಅವಧಿಯಲ್ಲಿ ನಡೆದ ಮೂಲಕಿ, ಹೆಗ್ಗೋಡು, ಶಿವಾರಗುಡ್ಡ, ಮಂಡ್ಯ, ಮೈಸೂರು, ಬೆಂಗಳೂರು, ಬಸವಕಲ್ಯಾಣ ಹಾಗೂ ಬೀದರ ಮೊದಲಾದ ಊರುಗಳಲ್ಲಿ ಜರುಗಿದ ರಾಜ್ಯ ಮಟ್ಟದ ಸಾಕ್ಷರತಾ ಕಾರ್ಯಗಾರಗಳಲ್ಲಿ ಭಾಗವಹಿಸಿ, ಜ್ಞಾನ ಪಡೆದು ತಂದು, ಬೀದರ ಜಿಲ್ಲೆಯಲ್ಲಿ ಹಂಚಿದರು. ಅಷ್ಟೇ ಅಲ್ಲ ಬೇರೆ ರಾಜ್ಯಗಳಾದ ಮಧ್ಯಪ್ರದೇಶ, ಆಂಧ್ರ ಪ್ರದೇಶ, ಕೇರಳ, ತಮಿಳುನಾಡುಗಳ ಸಂಪನ್ಮೂಲ ವ್ಯಕ್ತಿಗಳಿಗೆ ದುಭಾಷಿಯಾಗಿಯೂ ಮಹತ್ವದ ಕಾರ್ಯ ಮಾಡಿದರು. ಆಂಧ್ರದ ಮೇದಕನಲ್ಲಿ ಕನ್ನಡ ಸಾಕ್ಷರತಾ ಪ್ರಚಾರಕರಾಗಿ ಹೋಗಿ ಬಂದರು. ಬೀದರ ಜಿಲ್ಲೆಯ ಪ್ರತಿನಿಧಿಯಾಗಿ, ಇಲ್ಲಿಯ ಸಾಕ್ಷರತಾ ಯೋಜನೆಯ ಕಾರ್ಯಕ್ರಮಗಳು ಅತ್ಯಂತ ಯಶಸ್ವಿಯಾಗಿ ಜರುಗಲು ಹಾಗೂ ಅವುಗಳು ಅನುಷ್ಠಾನಗೊಳ್ಳಲು ದೇಶಾಂಶರು ಕಾರಣೀಭೂತರೆನಿಸಿದರು. ಅವರು ಈ ವಿಭಾಗದಲ್ಲಿ ಮಾಡಿದ ಕಾರ್ಯವು ಇಲ್ಲಿ ಜನಜನಿತವಾಗಿದ್ದು, ಅದನ್ನು ಮುಂದಿನವರೆಗೆ ತಿಳಿಸುವ ಪ್ರಯತ್ನವಾಗಬೇಕಿದೆ.

ಬೀದರ ಜಿಲ್ಲೆಯ ಆ.ಧುನಿಕ ಸಾಹಿತ್ಯ ಹಾಗೂ ಇಲ್ಲಿಯ ಕವಿಗಳನ್ನು ಕುರಿತು ಅಧ್ಯಯನವು ತುಂಬಾ ಗೌಣವಾಗಿ ನಡೆದಿದೆ. ಅದರಲ್ಲೂ ದೇಶಾಂಶ ಹುಡಗಿಯವರನ್ನು ಕುರಿತಾಗಲಿ ಹಾಗೂ ಅವರ ಪ್ರಕಟಿತ ಸಾಹಿತ್ಯವನ್ನು ಕುರಿತಾಗಲಿ ಸಂಶೋಧನಾತ್ಮಕವಾದ ಅಧ್ಯಯನ ನಡೆದೇಯಿಲ್ಲ. ಅಲ್ಲಲ್ಲಿ ಕೆಲವು ಬಿಡಿ ಲೇಖನಗಳು ಹಾಗೂ ಇತ್ತೀಚೆಗೆ ಅವರ ಅಭಿಮಾನಿಗಳಿಂದ ಬಂದ ಅಭಿನಂದನಾ ಗ್ರಂಥ ಮಾತ್ರ ಅವರನ್ನು ಕುರಿತು ಬಂದಿದ್ದು, ಅವು ವರ್ಣನಾತ್ಮಕ ಇಲ್ಲವೇ ಪರಿಚಯಾತ್ಮಕ ಬರವಣಿಗೆಗಳಾಗಿವೆ ಅಷ್ಟೇ. ಹೀಗಾಗಿ ದೇಶಾಂಶ ಹುಡಗಿಯವರ ಸಮಗ್ರ ಸಾಹಿತ್ಯದ ಅಧ್ಯಯನ ಜರುಗಬೇಕೆಂಬ ಉದ್ದೇಶದಿಂದ ಈ ವಿಷಯವನ್ನು ಸಂಶೋಧನೆಗಾಗಿ ಕೈಗೆತ್ತಿಕೊಳ್ಳಲಾಗಿದೆ.

ದೇಶಾಂಶ ಹುಡಗಿಯವರು ಕನ್ನಡ ಪ್ರೇಮಿ, ಶರಣಾಭಿಮಾನಿ, ನಾಡು–ನುಡಿಯನ್ನು ಕುರಿತಂತೆ ಹಾಗೂ ಬೀದರ ಜಿಲ್ಲೆಯ ಸಾಹಿತಿಗಳು, ಕಲಾವಿದರು,

ಸಮಾಜ ಸುಧಾರಕರನ್ನು ಕುರಿತಂತೆ ಹಲವಾರು ಚಿಂತನಾತ್ಮಕ ಲೇಖನಗಳನ್ನು ರಚಿಸಿದ್ದಾರೆ. ಪತ್ರಿಕಾ ರಂಗದಲ್ಲಿ ಕೈಯಾಡಿಸಿರುವ ಅವರು "ಅಕ್ಷರ ಕಾರಂಜಾ" ಶಾಂತಿಕಿರಣ, ಪತ್ರಿಕೆಗಳ ಸಂಪಾದಕ ಹಾಗೂ ಸಹ ಸಂಪಾದಕರಾಗಿ, ಪಬ್ಲಿಕ್ ಪತ್ರಿಕೆಯ ನಿರಂತರ ಬರಹಗಾರರಾಗಿ ಉತ್ತರ ಕರ್ನಾಟಕ ಪತ್ರಿಕೆಯ ಸಾಹಿತ್ಯ ಅಂಕಣಕಾರರಾಗಿ ವಚನಕ್ರಾಂತಿಯ ಸಾಹಿತ್ಯಕ್ಕೆ ಬರಹಗಾರರಾಗಿ, ವಿಶ್ವಕಲ್ಯಾಣವಾರ ಪತ್ರಿಕೆಯ ಬರಹಗಾರರಾಗಿ ಸೇವೆ ಸಲ್ಲಿಸಿದ್ದಾರೆ. ಅವರ ಇಲ್ಲಿಯ ಬರಹಗಳು ಅಧ್ಯಯನ ಯೋಗ್ಯವಾಗಿದ್ದು, ವೈಚಾರಿಕತೆಯನ್ನು ಮೂಡಿಸುತ್ತವೆ. ಅಂತೆಯೋ ಆಕಾಶವಾಣಿ, ದೂರದರ್ಶನಗಳಲ್ಲಿ ಬಿತ್ತರಗೊಂಡಿರುವ ಅವರ ಚಿಂತನೆಗಳು, ಸಭೆ-ಸಮಾರಂಭಗಳಲ್ಲಿ ಅವರು ಮಾಡಿರುವ ಭಾಷಣಗಳು ಬೀದರ ಜಿಲ್ಲೆಯ ಐತಿಹಾಸಿಕ ಪರಂಪರೆ ಹಾಗೂ ಸಾಹಿತ್ಯಿಕ ಶಿಸ್ತನ್ನು ಕುರಿತು ವೈಚಾರಿಕ ಲೇಖನಗಳಾಗಿದ್ದು, ಅವುಗಳ ಅಧ್ಯಯನ ನಡೆಯಬೇಕಾಗಿದೆ.

ದೇವರಾಯ ಶಾಂತಪ್ಪ ಶರಣಪ್ಪನವರು ಇಲ್ಲಿಯ ರಂಗಭೂಮಿಗೂ ತನ್ನದೇ ಆದ ಕೊಡುಗೆ ನೀಡಿದ್ದಾರೆ. ಸು ೨೫ ಕ್ಕಿಂತ ಹೆಚ್ಚು ನಾಟಕಗಳಲ್ಲಿ ಹಾಸ್ಯ ಪಾತ್ರ ಮಾಡಿದ್ದಾರೆ. ಉತ್ಪಲದತ್ತರ 'ಸೂರ್ಯಶಿಕಾರಿ' ನಾಟಕದ ವಿಜ್ಞಾನಿ ಕಲ್ಹಣನ ಪಾತ್ರದಾರಿಯಾಗಿ ಅವರು ಅಭಿನಯಿಸಿದ್ದನ್ನು ಅವರ ಮಿತ್ರ ಮಂಡಳಿಯವರೂ ಇನ್ನು ಮರೆತಿಲ್ಲ. ಅಷ್ಟೇ ಅಲ್ಲ ಅವರು ೨೦ ಸಾಮಾಜಿಕ ನಾಟಕಗಳ ನಿರ್ದೇಶನ ಮಾಡಿದ್ದಾರೆ. ಇಲ್ಲಿಯ ರಂಗಭೂಮಿಯನ್ನು ಕ್ರಿಯಾಶೀಲವಾಗಿರಿಸಿರುವ ಕೀರ್ತಿ 'ದೇಶಾಂಶ'ರಿಗೆ ಸಲ್ಲುತ್ತದೆ.

ದೆಸೀಶಾಂಶರ ಕನ್ನಡ ನಾಡು-ನುಡಿಯ ಸೇವೆ ಅನುಪಮವಾದುದು, ಬೀದರ ಜಿಲ್ಲೆಯ ಮುಡಬಿಯಲ್ಲಿ ಮರಾಠಿ ಹೈಸ್ಕೂಲ್ ಸ್ಥಾಪನೆ ವಿರುದ್ಧ ಏಕಾಂಗಿಯಾಗಿ ಪ್ರತಿಭಟಿಸಿದ್ದು, ಹುಡಗಿ ಹಾಗೂ ಮುಡಬಿ ಗ್ರಾಮಗಳಲ್ಲಿ ವಚನ ಸಾಹಿತ್ಯದ ಪ್ರಚಾರ ಮಾಡಿದ್ದು, ಉರ್ದು ಶಾಲೆಯಲ್ಲಿ ಓದುವಾಗ 'ಅಲ್ಲಾ ಹೋ ಅಕಬರ ಅನ್ನಲಾರೆನೆಂದು ಹಟ ಹಿಡಿದು ಅಲ್ಲಿ ಮಾಸ್ತರರಿಂದ ಹೊಡೆಸಿಕೊಂಡದ್ದು, ಕನ್ನಡ ಕವಿಗಳು ಹಾಗೂ ಸಾಹಿತಿಗಳನ್ನು ಪ್ರೋತ್ಸಾಹಿಸಿ ಲೇಖಕರ ಹಿಂಡು ಕಟ್ಟಿದ್ದು, ಧರಿನಾಡು ಕನ್ನಡ ಸಂಘ ಸ್ಥಾಪನೆ ಮಾಡಿ ಆ ಮೂಲಕ ಉದಯೋನ್ಮುಖ ಲೇಖಕರಿಗೆ ವೇದಿಕೆ ಒದಗಿಸಿದ್ದು, ಆ ಸಂಘದ ಮೂಲಕ ಈಗ ಸು. ೫೦ ಕ್ಕಿಂತ ಹೆಚ್ಚಿನ ಮೌಲಿಕ ಕೃತಿಗಳನ್ನು ಪ್ರಕಟಿಸಿದ್ದು, ಸಾಕ್ಷರತಾ ಆಂದೋಲನದಲ್ಲಿ ಕನ್ನಡ ಪ್ರಚಾರ ಮಾಡಿದ್ದು, ಅನೇಕ ಸಭೆ ಸಮಾರಂಭ ಹಾಗೂ ಸಮ್ಮೇಳನಗಳನ್ನು

ನಡೆಸಿದ್ದು, ಅವರ ಕನ್ನಡಾಭಿಮಾನಕ್ಕೆ ಸಾಕ್ಷಿಯಾಗಿರುವ ಸಂಗತಿಗಳಾಗಿವೆ. ಇವೆಲ್ಲವುಗಳ ಪರಿಚಯ ಮುಂದಿನ ತಲೆಮಾರಿನವರಿಗಾಗಬೇಕು.

ದೇವರಾಯ ಶಾಂತಪ್ಪನವರ ಸಾಹಿತ್ಯ ಕೃಷಿ ಅತ್ಯಂತ ಹುಲುಸಾಗಿದ್ದು, ಅಧ್ಯಯನ ಯೋಗ್ಯವಾಗಿದೆ. ೩೦ ಕ್ಕಿಂತ ಹೆಚ್ಚು ಕೃತಿಗಳನ್ನು ರಚಿಸಿರುವ ಇವರು ಅದರಲ್ಲಿ ೧೪ ಕೃತಿಗಳನ್ನು ಪ್ರಕಟಿಸಿದ್ದಾರೆ. ಇನ್ನೂ ೧೬ ಕೃತಿಗಳು ಪ್ರಕಾಶನಗೊಳ್ಳಬೇಕಾಗಿವೆ. ಇಂದಿನ ಇಳಿವಯಸ್ಸಿನಲ್ಲಿಯೂ ಅವರ ಸಾಹಿತ್ಯ ಪ್ರೇಮ ಗಂಗೆಯಂತೆ ಪ್ರವಹಿಸುತ್ತಿದ್ದು, ಸಂಶೋಧನೆ ಹಾಗೂ ಸಂಪಾದನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವರು ಕಾವ್ಯ ರಚಿಸಿ ಕವಿ ಎನಿಸಿಕೊಂಡಿದ್ದರೂ, ಅವರ ಗದ್ಯ ಸಾಹಿತ್ಯವೂ ಗಣನೀಯವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಹಿಂದುಳಿದ ಈ ಭಾಗದಲ್ಲಿ, ಉರ್ದು ಮರಾಠಿ, ತೆಲುಗು, ಹಿಂದೀ, ಇಂಗ್ಲೀಷ ಭಾಷೆಗಳ ದಟ್ಟಣೆಯ ಪ್ರಭಾವದಲ್ಲಿ ಕನ್ನಡ ಕವಿಯಾಗಿ, ಲೇಖಕರಾಗಿ ಪ್ರಸಿದ್ಧರಾಗಿರುವ ಚಿಂತಕರೊಬ್ಬರ ಸಮಗ್ರ ಸಾಹಿತ್ಯವನ್ನು ಗಮನಿಸುವ ದೃಷ್ಟಿಯಿಂದ ಎಂ.ಫಿಲ್. ಸಂಶೋಧನೆ ಅಧ್ಯಯನಕ್ಕಾಗಿ 'ದೇಶಾಂಶ' ಹುಡಗಿಯವರ ಸಾಹಿತ್ಯವನ್ನು ಸಂಶೋಧನೆಗೆ ಎತ್ತಿಕೊಂಡಿರುತ್ತೇನೆ.

'ದೇಶಾಂಶ' ಹುಡಗಿಯವರ ಸಮಗ್ರ ಸಾಹಿತ್ಯ – ಒಂದು ಅಧ್ಯಯನ ವಿಷಯದ ಈ ಸಂಶೋಧನೆಯನ್ನು ಆರು ಪ್ರಮುಖ ಅಧ್ಯಾಯಗಳಲ್ಲಿ ವಿಂಗಡಿಸಿ, ಅವರ ಜೀವನ ಮತ್ತು ಸಾಧನೆಗಳನ್ನು ಪರಾಮರ್ಶಿಸಿ ಅಧ್ಯಯನ ಮಾಡಲಾಗಿದೆ.

ಅಧ್ಯಾಯನ–೧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ತಿಳಿಸುತ್ತದೆ. ಧರಿನಾಡು ದುಂದುಂಬಿ, ಧರಿನಾಡ ಭಾರ್ಗವ ಎಂದು ಹೆಸರಾಗಿರುವ ದೇಶಾಂಶರು ೬೦ ರ ದಶಕದಿಂದಲೇ ಬರವಣಿಗೆಗೆ ತೊಡಗಿದವರು. ಇದುವರೆಗೆ ೧೪ ಕೃತಿಗಳನ್ನು ಪ್ರಕಟಿಸಿದ್ದಾರೆ. ಇದರಲ್ಲಿ ೫ ಕವನ ಸಂಕಲನಗಳಾಗಿದರೆ, ಉಳಿದವುಗಳು ಕಾವ್ಯೇತರ ಕೃತಿಗಳಾಗಿವೆ. ಇವುಗಳಲ್ಲಿ ಸಂಪಾದನೆ, ವ್ಯಕ್ತಿ ಚಿತ್ರಣ, ವಿಮರ್ಶೆ ಮತ್ತು ಅನುವಾದ ಕೃತಿಗಳಿವೆ. ಹೀಗೆ ಇವರ ಈ ಯಾವ ಕೃತಿಗಳ ಕುರಿತಾದ ಅಭ್ಯಾಸಪೂರ್ಣ ಅಧ್ಯಯನ ನಡೆದಿಲ್ಲ.

ಕನ್ನಡದ ಕ್ರಿಯಾಶೀಲ ವ್ಯಕ್ತಿಯಾಗಿರುವ ದೇಶಾಂಶರು ಈ ಭಾಗದಲ್ಲಿ ಅಧ್ಯಾಪಕರಾಗಿ ಸೇವೆ ಗೈದವರು. ನಾಡಿನ ಅನೇಕ ಪ್ರತಿಷ್ಠಿತ ಪ್ರಶಸ್ತಿಗಳನ್ನು ಪಡೆದವರಾಗಿದ್ದಾರೆ. ಕನನಡ ಕಾವ್ಯ ರಂಗದಲ್ಲಿ ರಚನಾತ್ಮಕ ಸಂದರ್ಭಗಳು ವಿರಳವಾಗಿದ್ದ ಕಾಲದಲ್ಲಿ, ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಕನ್ನಡದಲ್ಲಿ ಕಾವ್ಯದ ಕೃಷಿ ಮಾಡಿದವರಾಗಿದ್ದಾರೆ.

ಬಡತನದ ವಾತಾವರಣದಲ್ಲಿದ್ದುಕೊಂಡು ಉನ್ನತ ಶಿಕ್ಷಣ ಪಡೆದು ಮೂವತ್ತಕ್ಕೂ ಹೆಚ್ಚು ವರ್ಷಗಳ ಕಾಲ ತಮ್ಮ ವೃತ್ತ ಜೀವನದಲ್ಲಿ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆ, ಸಂಸ್ಕೃತಿ ಬಗೆಗೆ ಆಸಕ್ತಿ ಮೂಡಿಸಿ ಕನ್ನಡ ಕಲಿಯಲು ಪ್ರೇರೇಪಿಸಿದರು. ೧೯೫೭ರಲ್ಲಿ ಕೈ ಬರಹದ ಸೇಡಂ ಶಾಲಾ ಪತ್ರಿಕೆ ಸಂಪಾದಕರಾಗಿ, ಆರಂಭಿಸಿದ ಇವರ ಸಾಹಿತ್ಯದ ಕೃಷಿ ಇನ್ನೂ ಸಾಗಿರುವುದು ಗಮನಾರ್ಹ ಸಂಗತಿಯಾಗಿದೆ. ೧೯೭೦ ರಲ್ಲಿ ಪ್ರಕಟವಾದ ಮೊದಲ ಕೃತಿ 'ಗ್ರಾಮ ಶಿಲ್ಪಿಗಳು' ದಿಂದ ಆರಂಭಗೊಂಡ ಇವರ ಸಾಹಿತ್ಯ ಕೃಷಿ ವೈವಿಧ್ಯಮಯವಾಗಿ ಬೆಳೆದು ನಿಂತಿದೆ. 'ಅಕ್ಷರ ದೀಪ', ಅಕ್ಷರ ಕಾರಂಜಾ ಎಂಬ ಸಾಕ್ಷರತಾ ಪ್ರಕಟಣೆಗಳು ಇಲ್ಲಿ ಮನೆಮಾತಾಗಿವೆ. ಕನ್ನಡದಲ್ಲಿ ಇಂದು ವಿವಿಧ ಪಂಥಗಳು ಬೆಳೆದು ಬಂದಿದ್ದರೂ ಸಹ, ದೇಶಾಂಶರು ಆ ಯಾವುದೇ ಪಂಥಗಳಿಗೆ ಅಂಟಿಕೊಳ್ಳದೇ ತಾವೇ ವಿಶೇಷವಾಗಿ ಬೆಳೆದಿದ್ದಾರೆ. ಅವರ ಕಾವ್ಯಗಳಲ್ಲಿಯ 'ದೇಶಿಯತೆ' ವಿಶಿಷ್ಟವಾಗಿದ್ದು, ಓದುಗರಲ್ಲಿ ಕುತೂಹಲ ಮೂಡಿಸುತ್ತದೆ. ಅವರ ಗದ್ಯ ಕೃತಿಗಳಾದ 'ನಾಕಂಡ ನನ್ನವರು' ಬೀದರ ಜಿಲ್ಲೆಯ ಬರಹಗಾರರು' ಎಂಬವುಗಳು ಅವರ ಗಂಭೀರವಾಗಿರುವ ಅಭ್ಯಾಸವನ್ನು ಎತ್ತಿ ತೋರಿಸುತ್ತವೆ. ಧರಿನಾಡು ಸಂಘದ ಆರಂಭದ ಅಧ್ಯಕ್ಷರಾಗಿರುವ ಇವರು ಅಲ್ಲಿ ಪ್ರಕಟಿಸಿದ ಕೃತಿಗಳು ಹಾಗೂ ಹಾಕಿಕೊಂಡು ಪೂರೈಸಿರುವ ಕನ್ನಡ ಕಾರ್ಯಕ್ರಮಗಳು ತುಂಬಾ ಜನಪ್ರಿಯವಾಗಿವೆ. ಈ ಎಲ್ಲಾ ಅಂಶಗಳ ಮೂಲಕ ಒಬ್ಬ ಕ್ರಿಯಾಶೀಲ ವ್ಯಕ್ತಿ ಹಾಗೂ ಸಮಾಜದ ಸಂಬಂಧವನ್ನು ಸಾಂಸ್ಕೃತಿಕವಾಗಿ ಗುರುತಿಸಲು ಅವರ ಸಾಹಿತ್ಯ ಪ್ರಮುಖವೆನಿಸುತ್ತಿದ್ದು, ಅವರ ಆದರ್ಶ ವ್ಯಕ್ತಿತ್ವವೂ ಜನಮನ್ನಣೆಗಳಿಸಿದೆ. ಹೀಗಾಗಿ ಇವರ ಸಾಹಿತ್ಯದ ಸಮಗ್ರ ಅಧ್ಯಯನದ ಅಗತ್ಯತೆ ಇರುವುದನ್ನು ಗಮನಿಸಿ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

ಅಧ್ಯಾಯ ೨ ರಲ್ಲಿ ಅಧ್ಯಯನ ಪೂರ್ವ ಪ್ರವೇಶಿಕೆ ಹಾಗೂ ಬೀದರ ಜಿಲ್ಲೆಯ ಸಾಹಿತ್ಯ ನಡೆದು ಬಂದಿರುವ ಹೆಜ್ಜೆಗಳನ್ನು ಗುರುತಿಸಲಾಗಿದೆ. ದೇಶಾಂಶ ಅವರು ಕವಿಯಾಗಿ ನಿರೂಪಿತವಾಗಿರುವ ಅವರ ಪರಿಸರವನ್ನು ಗಮನಿಸಿ ಬೀದರ ಜಿಲ್ಲೆಯ ಅಂದಿನ ಸಂದರ್ಭದ ಶಿಕ್ಷಣ, ಸಾಹಿತ್ಯ ಹಾಗೂ ಸಂಸ್ಕೃತಿಗಳ ಕುರಿತಾದ ಸ್ಥೂಲ ನೋಟವನ್ನು ಮಾಡಲಾಗಿದೆ. ಹಾಗೂ ಬೀದರ ಜಿಲ್ಲೆಯ ಸಾಹಿತಿಗಳ ಸಂಕ್ಷಿಪ್ತ ಪರಿಚಯದೊಂದಿಗೆ ಜಿಲ್ಲೆಯ ಸಾಹಿತ್ಯದ ಪ್ರತಿನಿಧಿಕ ಹೆಜ್ಜೆಗಳನ್ನು ಅರಿಯಲಾಗಿದೆ.

ಅಧ್ಯಾಯ –೩ ರಲ್ಲಿ ದೇವರಾಯ ಶಾಂತಪ್ಪ ಶರಣಪ್ಪನವರ ಜೀವನ ಮತ್ತು ಸಾಧನೆಗಳನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಸಾಮಾಜಿಕ ಜೀವಿಯೆನಿಸುವ ಒಬ್ಬ ಕವಿ ಸಾಹಿತ್ಯ ಸೃಷ್ಟಿಯ ಜೊತೆಗೆ, ಓದುಗ ಬಳಗಕ್ಕೂ ಆನಂದ ತಂದುಕೊಡುವ ಕಲೆಯನ್ನು ಹೇಗೆ ಸಾಧಿಸಿಕೊಂಡಿರುತ್ತಾನೆ. ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದ್ದು, ಅವರನ್ನು ರೂಪಿಸಿದ ಮನೆತನ, ಬಾಲ್ಯ, ಶಿಕ್ಷಣ ಹಾಗೂ ಸಾಹಿತ್ಯಿಕ ವಾತಾವರಣಗಳನ್ನು ಇಲ್ಲಿ ವಿವರವಾಗಿ ನೋಡಲಾಗಿದೆ.

ಅಧ್ಯಾಯ–೪ ರಲ್ಲಿ 'ದೇಶಾಂಶ' ರ ಸಮಗ್ರ ಸಾಹಿತ್ಯ ಕೃತಿಗಳನ್ನು ಕುರಿತು ಚರ್ಚಿಸಲಾಗಿದ್ದು, ಇದು ಈ ಪ್ರಬಂಧದ ಬಹುಮುಖ್ಯ ಅಧ್ಯಾಯವಾಗಿದೆ. ಕಾವ್ಯ ಹಾಗೂ ಕಾವ್ಯೇತರ ಭಾಗಗಳ ಅಡಿಯಲ್ಲಿ ದೇಶಾಂಶರ ಸಾಹಿತ್ಯದ ಚಿಂತನೆಯನ್ನು ಕೈಗೊಳ್ಳಲಾಗಿದೆ. ಆಶಯ ಮತ್ತು ಅಭಿವ್ಯಕ್ತಿ ಚಿಂತನೆ, ಸಾಮಾಜಿಕ ಚಿಂತನೆ, ಜೀವನ ದರ್ಶನಗಳನ್ನು ಕಾವ್ಯದಲ್ಲಿ ಗುರುತಿಸಲಾಗಿದ್ದು, ಅವರ ಕಾವ್ಯೇತರ ಸಾಹಿತ್ಯವಾದ ಸಂಶೋಧನೆ, ಸಂಪಾದನೆ, ವಿಮರ್ಶೆ ಹಾಗೂ ಅನುವಾದವನ್ನು ಪ್ರತ್ಯೇಕವಾಗಿ ಗಮನಿಸಲಾಗಿದೆ. ಈ ಭಾಗದ ಹಿರಿಯ ಕವಿಗಳೆನಿಸಿರುವ ಇವರು ಆಕಾಶವಾಣಿ ಮೂಲಕವು ಜನಮನ ಮುಟ್ಟುವ ಚಿಂತನಗಳನ್ನು ಪ್ರಕಟಿಸಿದ್ದಾರೆ. ನಾಟಕಾಭಿನಯ, ಜಾನಪದ ಹಾಡುಗಾರಿಕೆ, ಭಜನೆ, ತತ್ವಪದಗಳ ಸ್ವರಚನೆಯ ಮೂಲಕವೂ ಪ್ರಸಿದ್ಧರಾಗಿರುವ ದೇಶಾಂಶರು ಒಟ್ಟು ಪ್ರಮುಖವಾಗಿ ಸಾಹಿತಿಯಾಗಿ ಕಂಗೊಳಿಸಿರುವುದನ್ನು ಅವರ ಬರಹಗಳ ಹಿನ್ನೆಲೆಯಲ್ಲಿ ಪರಾಮರ್ಶಿಸಿ ವಿವೇಚಿಸಲಾಗಿದೆ.

ಅಧ್ಯಾಯ ೫ ರಲ್ಲಿ ಕವಿ ದೇಶಾಂಶರು ತಮ್ಮ ಕಾವ್ಯದಲ್ಲಿ ಬಳಸಿದ ಭಾಷೆ, ಛಂದಸ್ಸು ಹಾಗೂ ಹೊಸಗನ್ನಡದ ಮಾದರಿಗಳನ್ನು ಕುರಿತು ಅವಲೋಕಿಸಲಾಗಿದೆ. ಬದುಕಿನಸುತ್ತ ಹಾಗೂ ದಿಗಂಬರ ವಚನಗಳು ಕ್ರಮವಾಗಿ ಭಾವಗೀತೆ ಮಾದರಿಯ ಕವನ ಹಾಗೂ ಆಧುನಿಕ ವಚನಗಳಾಗಿವೆ. ಪ್ರಾದೇಶಿಕವಾಗಿ ಬೀದರ ಜಿಲ್ಲೆಯ ಭಾಷೆ ಇಲ್ಲಿದೆ. ಮುಕ್ತ ಛಂದಸ್ಸಿರುವ ಅವರ ಕವನಗಳು ತನ್ನದೇ ಆದ ವೈಶಿಷ್ಯತನದಿಂದ ಕೂಡಿವೆ ಎಂಬುದನ್ನು ಅರಿಯಲಾಗಿದೆ.

ಅಧ್ಯಾಯ–೬ರಲ್ಲಿ ಸಮಕಾಲಿನ ಕವಿಗಳಲ್ಲಿ 'ದೇಶಾಂಶ' ರ ಸ್ಥಾನ ಮಾನಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಇದೊಂದು ತೌಲನಿಕ ವಿವೇಚನೆಯಾಗಿದ್ದು, ಅವರ ಸಮಕಾಲೀನರಾದ ಜಿ.ಬಿ. ವಿಸಾಜಿ, ಬಂಡೆಪ್ಪಾ ಖೂಬಾ ಹಾಗೂ ಕಾಶಿನಾಥ ಅಂಬಲಗೆ ಯವರೊಂದಿಗೆ ಇರಿಸಿ ಅವರ ಸಾಹಿತ್ಯದ ಸಾಮ್ಯತೆ ಹಾಗೂ ಭಿನ್ನತೆಗಳನ್ನು ಕಂಡುಕೊಳ್ಳಲಾಗಿದೆ.

ಒಟ್ಟಿನಲ್ಲಿ ತಮ್ಮ ಜೀವನದ ೭೬ ವಸಂತಗಳನ್ನು ದಾಟಿ ಬಂದಿರುವ ದೇಶಾಂಶರ ಜೀವನೋತ್ಸಾಹ ಮೆಚ್ಚುವ ಅಂಶವಾಗಿದ್ದು, ಅವರ ಲೇಖನಿಗೆ ಇಂದಿಗೂ ಬಿಡುವು ಸಿಕ್ಕಿಲ್ಲ. ವೈವಿಧ್ಯಮಯವಾದ ಅವರ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಒಂದು ವಿಶಿಷ್ಟತೆಯನ್ನು ಹೊಂದಿ ನಿಂತಿದ್ದು, ಅದು ಅನುಕರಣೀಯವಾಗಿದೆ. ಈ ಅದ್ಯಯನದುದ್ದಕ್ಕೂ ದೇಶಾಂಶರ ವ್ಯಕ್ತಿತ್ವ ಮತ್ತು ಸಾಹಿತ್ಯವನ್ನು ಅರ್ಥೈಸಿಕೊಳ್ಳುವ ಮೂಲಕ ಅವರು ವೈಯಕ್ತಿಕತೆಯಿಂದ ಸಾರ್ವತ್ರಿಕತೆಯತ್ತ ನಡೆದಿರುವ ಸಂದರ್ಭವನ್ನು ಗುರುತಿಸುವ ಒಂದು ಪ್ರಮಾಣಿಕ ಪ್ರಯತ್ನ ಈ ಕಿರು ಸಂಶೋಧನೆಯಲ್ಲಿದೆ ಎಂದು ಹೇಳಬಯಸುತ್ತೇನೆ.

# ಅಧ್ಯಯನದ ಪೂರ್ವ ಪ್ರವೇಶಿಕೆ 'ದೇಶಾಂಶ'ರ ಸಾಹಿತ್ಯದ ಹಿನ್ನೆಲೆ

ಕರ್ನಾಟಕದ ಉತ್ತರ ತುದಿಯಲ್ಲಿರುವ ಬೀದರ ಜಿಲ್ಲೆ ಮಹಾರಾಷ್ಟ್ರ ಹಾಗೂ ಆಂಧ್ರ ರಾಜ್ಯಗಳಿಗೆ ಹೊಂದಿಕೊಂಡಿದೆ. ಔರಾದ, ಬಸವಕಲ್ಯಾಣ, ಭಾಲ್ಕಿ, ಬೀದರ ಹಾಗೂ ಹುಮನಾಬಾದ ಎಂಬ ಐದು ತಾಲೂಕುಗಳನ್ನು ಒಳಗೊಂಡಿರುವ ಇದು 'ಕಲ್ಯಾಣ ನಾಡು' ಎಂದೇ ಪ್ರಸಿದ್ಧವಾಗಿದೆ. ಹಿಂದೆ 'ಕುಂತಳ ಪ್ರದೇಶ'ವೆಂದು ಕರೆಸಿಕೊಂಡಿದ್ದ ಈ ಜಿಲ್ಲೆಗೆ ಅತ್ಯಂತ ಪ್ರಾಚೀನವಾದ ಇತಿಹಾಸವಿದೆ. ನಂದ, ಮೌರ್ಯ, ಶಾತವಾಹನ, ರಾಷ್ಟ್ರಕೂಟ, ಚಾಲುಕ್ಯ, ಕಳಚೂರಿ, ಯಾದವರು ರಾಜ್ಯವನಾಳಿದ ಈ ಪ್ರದೇಶದಲ್ಲಿ ತುಘಲಕ್ ಬಹಮನಿ ಬರೀದ್ ಶಾಹಿ, ಆದಿಲ್ ಶಾಹಿ, ಮೊಗಲ್, ನೈಜಾಂ ಶಾಹಿ ಅರಸರೂ ಆಳ್ವಿಕೆ ನಡೆಸಿದ್ದಾರೆ. ಅಂತೆಯೇ ಇಲ್ಲಿ ವಿಭಿನ್ನ ಭಾಷೆ, ಧರ್ಮ, ಕಲೆಗಳು ಈ ಭಾಗದಲ್ಲಿ ನೆಲೆಗೊಂಡು ನಿಂತಿವೆ. ಹೀಗಾಗಿ ಬೀದರ ಜಿಲ್ಲೆ ಸಾಹಿತ್ಯಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ತುಂಬಾ ಗಮನಾರ್ಹವಾಗುತ್ತದೆ.

ಅನಂತ ಭಾಷೆಗಳು ವಿವಿಧ ಕಲೆಗಳು ಹಲವು ಧರ್ಮಗಳು ಬಾಳಿ ಬೆಳಗಿರುವ ಇಲ್ಲಿ ಶರಣರ ವಚನಗಳಿವೆ. ಅನುಭಾವಿಗಳ ಹಾಡುಗಳಿವೆ. ಜನಪದರ ಆನಂದ ಕುಣಿತಗಳಿವೆ. ಅನೇಕ ಕವಿಗಳು ಬರೆದಿದ್ದಾರೆ. ಗಮನಾರ್ಹವೆನಿಸುವಷ್ಟು ಸೃಜನ ಸಾಹಿತ್ಯ ಹಾಗೂ ಸೃಜನೇತರ ಸಾಹಿತ್ಯ ಇಲ್ಲಿ ಸೃಷ್ಟಿಯಾಗಿದೆ.

ಬೀದರ ಜಿಲ್ಲೆಯ ಸಾಹಿತ್ಯ ಪರಂಪರೆ ಸಾಹಿತ್ಯಿಕವಾಗಿ ಈ ಜಿಲ್ಲೆಗೆ, ರಾಜ್ಯಕ್ಕೆ ದೇಶದಲ್ಲಷ್ಟೆ ಅಲ್ಲ, ವಿಶ್ವದಲ್ಲಿಯೇ ಮನ್ನಣೆಯಿದೆ. ೧೨ ನೆಯ ಶತಮಾನದ ವಚನ ಸಾಹಿತ್ಯ ಈ ಜಿಲ್ಲೆ ವಿಶ್ವಕ್ಕೆ ನೀಡಿದ ಕೊಡುಗೆಯಾಗಿದೆ. ಕನ್ನಡದ ಪ್ರಪ್ರಥಮ ಗದ್ಯ ಗ್ರಂಥವೆನಿಸಿರುವ **'ವಡ್ಡಾರಾಧನೆ'** ಈ ಜಿಲ್ಲೆಯ ಹಳ್ಳಿಖೇಡ ಗ್ರಾಮದಲ್ಲಿ ರಚನೆಯಾಗಿದೆ. ಸಂಸ್ಕೃತದಲ್ಲಿ **'ಮಿತಾಕ್ಷರ'** ಎಂಬ ನ್ಯಾಯ ಸಂಹಿತೆಯ ಗ್ರಂಥ ರಚಿಸಿರುವ ವಿಜ್ಞಾನೇಶ್ವರ ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಮಾಸಿಮಾಡ ಗ್ರಾಮದವನು[1]. ಬಹುಮನಿ ಸುಲ್ತಾನ ಅಹ್ಮದ ಶಾನ ಆಸ್ಥಾನ ಕವಿ ಆಧರೆ **'ಬಹುಮನ ನಾಮಾ'** ಎಂಬ ಉರ್ದು ಗ್ರಂಥ ರಚಿಸಿದ್ದು, ಇಲ್ಲಿಯೇ ಅರಸರ ಕಾಲದಲ್ಲಿ ಸೂಫಿ ನಂತರ ಸಮಾವೇಶವಾಗಿ ಇಲ್ಲಿ ಅಪಾರವಾದ ಧಾರ್ಮಿಕ ಸಾಹಿತ್ಯ ಸೃಷ್ಟಿಯಾಯಿತೆಂದು ಹೇಳಲಾಗುತ್ತದೆ[2]. ಮುಂದೆ ಹೈದ್ರಾಬಾದ ನಿಜಾಮರ ಕಾಲದಲ್ಲಿ ಇಲ್ಲಿ **ಖವ್ವಾಲಿ** ಪ್ರಕಾರಗಳ ಸಾಹಿತ್ಯ ನಿರ್ಮಾಣಕ್ಕೆ ಕಾರಣೀಭೂತವಾಯಿತು. ೧೬ ನೆಯ ಶತಮಾನದಲ್ಲಿ ಈ ಪ್ರದೇಶದಲ್ಲಿ ಬಸವಕಲ್ಯಾಣದ ಶಿವರಾಂ ಸ್ವಾಮಿಗಳು, **'ಗೀತಾ ಚಂದ್ರಿಕೆ'** ಎಂಬ ಆಧ್ಯಾತ್ಮ ರಾಮಾಯಣವನ್ನು ಮರಾಠಿ ಭಾಷೆಯಲ್ಲಿ ರಚಿಸಿದ್ದು, ಕಂಡು ಬರುತ್ತದೆ. ಆ

---

1 ಡಾ. ಗುರುಲಿಂಗಪ್ಪ ದಬಾಲೆ– ಬೀದರ ಜಿಲ್ಲೆಯ ತತ್ವಪದಕಾರರು ಪು–

2 ಡಾ. ಗುರುಲಿಂಗಪ್ಪ ದಬಾಲೆ– ಬೀದರ ಜಿಲ್ಲೆಯ ತತ್ವಪದಕಾರರು ಪು–

ನಂತರ ಇದೇ ಭಾಷೆಯಲ್ಲಿ **'ಸಿದ್ಧಸಂಕೇತ'**, **'ಅಮೃತಸಾರ'** ಎಂಬ ಕೃತಿಗಳ ನಿರ್ಮಾಣವಾಗಿದೆ. ಹೀಗೆ ಪ್ರಾಚೀನ ಕಾಲದಲ್ಲಿ ಬೀದರ ಜಿಲ್ಲೆಯು ವಿವಿಧ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸಮ್ಮಿಲನದಿಂದ ಸಂಪದ್ಭರಿತವಾಗಿದ್ದುಕೊಂಡು ಬಂದಿರುವುದನ್ನು ನಾವಿಲ್ಲಿ ಅರಿಯಬಹುದು. ೧೮ ನೆಯ ಶತಮಾನದಿಂದ ಈ ಜಿಲ್ಲೆಯಲ್ಲಿ ತತ್ವಕಾರರ ತತ್ವಪದ ಸಾಹಿತ್ಯವು ಆರಂಭವಾಗಿದ್ದು, ಅವರಲ್ಲಿ ಮರಕುಂದಿ ಬಸವಣಪ್ಪ, ನಿಡವಂಚಿಯ ನಿಜಲಿಂಗ ಭದ್ರೇಶ್ವರ, ಆಣದೂರಿನ ಜಹೂರ ಅಲಿಶಾ, ಅಷ್ಟೂರಿನ ಲಕ್ಷ್ಮಣ ಸಾಧು, ಆಣದೂರದ ಮೋನಪ್ಪ, ಬೀದರದ ಕಾಶಿನಾಥ ಸಿಂಧೆ, ಕಂಗಟಿಯ ಶರಣಪ್ಪ ಶಾಸ್ತ್ರಿ, ಬೀದರದ ರಘುನಾಥ ಹಡಪದ, ಆಣದೂರದ ಶಂಭಣ್ಣ ನೇಮತಾಬಾದ, ಶಿವರಾಮ, ಬೀದರದ ಸಿದ್ರಾಮಪ್ಪ ಹೊಸಮನಿ, ಕೊಹಿನೂರಿನ ಭದ್ರಪ್ಪ, ಕೊಳ್ಳೂರಿನ ಹಸನಾ, ಬಸವಕಲ್ಯಾಣದ ಮಾಣಿಕಪ್ಪಾ, ಹಾಕೂಡದ ಶಂಕರ ಶೀಲವಂತ, ನಾವದಗಿಯ ನಾಗಲಿಂಗ ಕವಿ, ಚಿಟಗುಪ್ಪಾದ ಮಂಕಲ್ ಹಣಮಂತಪ್ಪ, ಧುಮ್ಮನಸೂರಿನ ಸಿದ್ಧಪ್ರಭು ಚಿಟಗುಪ್ಪಾದ ಶಿಲಪ್ಪ ಭೂತಾಳೆ ಮೊದಲಾದ ಸು. ೭೦ ಕ್ಕಿಂತ ಹೆಚ್ಚು ಜನ ತತ್ವ ಪದಕಾರರು ಇಲ್ಲಿ ಆಗಿ ಹೋಗಿದ್ದು ಕಂಡು ಬರುತ್ತದೆ. ಈಗಿನ ಕಾಲದವರೆಗೂ ಮುಂದುವರೆದಿರುವ ಈ ತತ್ವಪದಕಾರರ ಪರಂಪರೆಯಲ್ಲಿ ನಮ್ಮ ದೇವರಾಯ ಶಾಂತಪ್ಪ ಶರಣಪ್ಪ ನವರು ಒಬ್ಬರಾಗಿರುವುದು ಗಮನಾರ್ಹ ಸಂಗತಿಯಾಗಿದೆ.

ಬೀದರ ಜಿಲ್ಲೆಯಲ್ಲಿ ಹೊಸ ಕಾವ್ಯ ಕಾಣಿಸಿಕೊಂಡದ್ದು, ೧೯೬೦ ರ ನಂತರದಲ್ಲಿ ಆಗಷ್ಟೇ ಗಿಡಗಂಟೆಗಳ ಕೊರಳೊಳಗಿಂದ ಹಕ್ಕಿಗಳ ಹಾಡು ಶುರುವಾಗಿತ್ತು. ೧೯೬೩ ರಲ್ಲಿ ಮಾಣಿಕರಾವ ದನಶ್ರೀಯವರ "ಹಾಡುತ್ತ ಕಲಿ" ಮಕ್ಕಳ ಸಂಗ್ರಹ ಪ್ರಕಟವಾಯಿತು. ಈ ವೇಳೆಗಾಗಲೇ ಬೇಂದ್ರೆ, ಮಧುರಚೆನ್ನರ ಕಾವ್ಯ ಅತ್ಯುತ್ತಮ ಕಾಣ್ಕೆಗಳನ್ನು ನೀಡಿಯಾಗಿತ್ತು. ಅಡಿಗರು ಕಾವ್ಯ ರಂಗವನ್ನು ಪ್ರವೇಶಿಸಿ ಹೊಸ ಅನುಭವಲೋಕವನ್ನು ಕಟ್ಟುತ್ತಿದ್ದರು. ಆಧುನಿಕ ಕನ್ನಡ ಕಾವ್ಯ ಶತಮಾನದ ಅಂಚನ್ನು ತಲುಪಿಯಾಗಿತ್ತು. ಇದಕ್ಕೆ ಹೋಲಿಸಿದರೆ ಬೀದರ ಜಿಲ್ಲೆಯ ಹೊಸ ಕಾವ್ಯದ ಅವಧಿ ಕೇವಲ ನಲವತ್ತು ವರ್ಷ ಮಾತ್ರ[3]. ಆ ಧನಶ್ರೀಯವರ ಮಕ್ಕಳ ಸಂಗ್ರಹ ಪ್ರಕಟವಾದ ೧೦ ವರ್ಷಗಳ ತರುವಾಯ 'ಬೆಳಗಾಗುತಿದೆ' ಎಂಬ ಬಸವರಾಜ ಸೈನೀರ್ (೧೯೭೪) ಮತ್ತು ಜಿ.ಜಿ. ವಿಸಾಜಿಯವರ ಮುಂಜಾವು (೧೯೭೫) ಸಂಕಲನಗಳು ಪ್ರಕಟಗೊಂಡವು. ಚಾರಿತ್ರಿಕವಾಗಿ ಬೀದರ ಜಿಲ್ಲೆಯ ಎರಡನೆಯ ಮತ್ತು ಮೂರನೆಯ ಕಾವ್ಯ ಸಂಗ್ರಹಗಳಿವು ಎನ್ನಬಹುದು. ಆನಂತರದಲ್ಲಿ ಪ್ರೇಮಾ ಸಿರ್ಸೆ, ಕೆರಳ್ಳಿ ಲಕ್ಷ್ಮಾರೆಡ್ಡಿ, ಕಾಶಿನಾಥ ಅಂಬಲಗೆ, ದೇಶಾಂಶ ಹುಡಗಿ, ಕೆ.ಜಿ. ಮಾಶೆಟ್ಟಿ ಎಂ.ಜಿ. ಗಂಗನಪಳ್ಳಿ, ವಿಜಯಶ್ರೀ ಸಬರದ, ಬಾಬು ಪೂಜಾರಿ, ಕೆ. ನೀಲಾ, ಶರಣಯ್ಯ ಮಠಪತಿ, ಪಂಚಾಕ್ಷರಿ ಹಿರೇಮಠ, ಮುಂತಾದವರನ್ನು ಬೀದರ ಜಿಲ್ಲೆಯ ಪ್ರಾತಿನಿಧಿಕ ಕವಿಗಳೆಂದು ಗುರುತಿಸಬಹುದು. ಕಾವ್ಯಕ್ಕೆ ಅವಶ್ಯವಿರುವಕೆಲವು ಸೂಕ್ಷ್ಮತೆಗಳನ್ನು ಕಾಪಾಡಿಕೊಂಡಿರುವ

---

[3] ವಿಕ್ರಮ ವಿಸಾಜಿ ಕಾವ್ಯದ ವೈಶಿಷ್ಟ್ಯಗಳು – ಬೀದರ ಜಿಲ್ಲಾ ದರ್ಶನ ಪು–೧೦೭.

ಇವರ ಕವನಗಳು ಕೆಲಮಟ್ಟಿಗಾದರೂ ಹೊಸ ಕ್ರಮದಲ್ಲಿ ರಚನೆಯಾಗಿರುವದು ಗಮನಾರ್ಹ ಅಂಶ.

೧೯೮೮ರ ರಿಂದೀಚೆಗೆ ಬೀದರ ಜಿಲ್ಲೆಯ ಕವಿಗೋಷ್ಠಿಗಳಲ್ಲಿ ಬಹಳ ಯುವಕವಿಗಳು ಭಾಗವಹಿಸುತ್ತಿದ್ದು, ಇನ್ನೂ ಕೆಲವರು ತಮ್ಮ ಒಂದೋ ಎರಡೋ ಸಂಕಲನಗಳನ್ನು ಹೊರತಂದಿದ್ದಾರೆ. ಬಹಳ ಜನರಲ್ಲಿ ಮುಗ್ದತೆ, ಪ್ರಾಮಾಣಿಕ ಕಳಕಳಿಗಳು ಕವಿತೆಯಾಗಿ ಮೂಡಿದ್ದಕ್ಕೆ ಹಲವರು ನವೋದಯ ಮತ್ತು ಬಂಡಾಯದ ಕಾವ್ಯ ರಚನಾ ಮಾದರಿಯನ್ನೇ ಇಲ್ಲಿ ಬಹಳವಾಗಿ ನೆಚ್ಚಿಕೊಂಡಿರುವುದು ಎದ್ದು ಕಾಣುತ್ತದೆ. ತುಂಬಾ ಭಾವುಕತೆಯಲ್ಲಿ ಮುಳುಗಿ ಹೋಗಿರುವ ಹೆಚ್ಚಿನ ಕವಿಗಳು ಪ್ರೇಮದ ಭಾವುಕತೆಯಲ್ಲಿ ಪರವಶರಾಗಿ, ಆಧ್ಯಾತ್ಮದ ಎಂಥೆಂಥದೊ ಪರಿಭಾಷೆಯಲ್ಲಿ ನಾಡು–ನುಡಿಯ ಬಗ್ಗೆ ಗದ್ಗದಿತರಾಗಿ ಹಾಡುತ್ತಿದ್ದುದು ಎದ್ದು ಕಾಣುತ್ತಿದ್ದು, ಅವರ ಕವಿತೆ ಬರೆಯುವಿಕೆ ಹಾಗೂ ವಾಚನ ಮಾಡುವುದು ಅಭಿಮಾನದ ಸಂಗತಿ ಎನಿಸುತ್ತದೆ. ಆದರೂ ಹೊಸ ಕವಿಗಳು ಶಬ್ದಗಳ ಭಾರದಲ್ಲಿ ಚಡಪಡಿಸುತ್ತಿದ್ದು, ಮಾತಿನಲ್ಲಿಯ ಆಡಂಬರವನ್ನೇ ಸಾಲುಗಳಾಗಿ ರಚಿಸುತ್ತಿರುವುದು ಅವರ ಮುಗ್ದತೆಗೆ ಸಾಕ್ಷಿಯಾಗುತ್ತದೆ. ತಮ್ಮ ಭಾವುಕತೆಯನ್ನಾದರೂ ಪ್ರಮುಖವಾಗಿ ಉಳಿಸಿಕೊಳ್ಳದ ಎಷ್ಟೋ ಕವಿಗಳ ಕಾವ್ಯಗಳು ಕಾವತ್ವದ ಗುಣದಿಂದ ದೂರ ನಿಲ್ಲುತ್ತವೆ. ಇಂಥ ಹೊಸ ಕಾವ್ಯದ ಅವಸ್ಥೆಗೆ ಪ್ರಮುಖ ಕಾರಣವೆಂದರೆ, ಮರಾಠಿ ಹಾಗೂ ಉರ್ದು ಭಾಷೆಯ ಒತ್ತಡದಲ್ಲಿ ಕನ್ನಡ ಭಾಷೆಯನ್ನೇ ಉಳಿಸಿಕೊಳ್ಳುವುದು ಕಷ್ಟ ಸಾಧ್ಯವಾಗಿತ್ತು. ಅಂಥ ವಾತಾವರಣದಲ್ಲಿ ಇಲ್ಲಿ ಕಾವ್ಯ ಸೃಷ್ಟಿಯಾಗಿದ್ದೇ ಒಂದು ರೀತಿಯ ಸವಾಲು ಎನ್ನುವ ಧೋರಣೆ ಇಲ್ಲಿ ಕಾಣ ಸಿಗುತ್ತದೆ. ಆದರೂ ಜಿಲ್ಲೆಯ ಭಾಷೆಯನ್ನು ಸಮರ್ಥವಾಗಿ ಉಳಿಸಿಕೊಂಡು ಆ ಮೂಲಕ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕಾಣಿಕೆಯನ್ನು ಕೊಟ್ಟವರು. ಶ್ರೀ ದೇಶಾಂಶ ಹುಡಗಿಯವರು ಅವರ ಕಾವ್ಯದ ಆಶಯ ಹಾಗೂ ಅಭಿವ್ಯಕ್ತಿಗಳನ್ನು ಮುಂದಿನ ಅಧ್ಯಾಯದಲ್ಲಿ ಕಾಣಬಹುದು.

ಬೀದರ ಜಿಲ್ಲೆಯಲ್ಲಿ ಕಾದಂಬರಿಗಿಂತ ಸಣ್ಣ ಕತೆಗಳ ಹೊಸ ಅಲೆ ಹೆಚ್ಚಾಗಿ ಕಾಣಿಸಿಕೊಂಡಿತು. ಈ ಸಂದರ್ಭದಲ್ಲಿ ಕತೆಗಳನ್ನು ಬರೆದು ಗಮನ ಸೆಳೆದವರೆಂದರೆ ಶ್ರೀಕಾಂತ ಪಾಟೀಲ, ಶಿವಕುಮಾರ ನಾಗವಾರ, ಗುರುನಾಥ ಅಕ್ಕಣ್ಣ, ಕ್ಷಿತಿಜ ಮುಂತಾದವರು. ಅವರ ಹಾಗೆ ಬೇರೆ ಭಾಷೆಯ ಪ್ರಸಿದ್ಧ ಕತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿದವರು ಬಂಡೆಪ್ಪ ಖೂಬಾ ಅವರು. ಅವರು ಕೆಲವು ಕಥೆಗಳನ್ನು ಸ್ವತಃ ಪ್ರಕಟಿಸಿದ ವಿಷಯವೂ ತಿಳಿದು ಬಂದಿದೆ. ೧೯೬೯ ರಲ್ಲಿ **'ಅನಂತ ಸಂಗಮ'** ಎಂಬ ಸಂಕಲನವನ್ನು ಪ್ರಕಟಿಸುವ ಮೂಲಕ ಜಿ.ಬಿ. ವಿಸಾಜಿಯವರು ಈ ಜಿಲ್ಲೆಯ ಕಥಾ ಸಾಹಿತ್ಯಕ್ಕೆ ಬುನಾದಿ ಹಾಕಿದರು[44]. ಆನಂತರದಲ್ಲಿ ಎಂ.ಜಿ. ದೇಶಪಾಂಡೆ, ಚಂದ್ರಕಾಂತ ಪಾಟೀಲ, ಬಾಲಚಂದ್ರ ಜಯಶೆಟ್ಟಿ, ಅರುಂದತಿ ಚಾಂದಕವಠೆ, ಗಣಪತಿ ಭೂರೆ, ರುಕ್ಮೊದ್ದಿನ ಇಸ್ಲಾಂಪೂರ, ಮೊದಲಾದವರು 'ಪಾರಿಜಾತ, ಪರಿವರ್ತನೆ, ಮಿರ್ಚಿಬಾಬಾ ಮತ್ತು ಇತರ ಕಥೆಗಳು,

---

[4] ಡಾ. ಹೇಮಲತಾ ವಡ್ಡೆ – ಕಥಾ ಸಾಹಿತ್ಯ – ಬೀದರ ಜಿಲ್ಲಾ ದರ್ಶನ – ಪು ೧೩೧.

ಬೆಂಕಿಮರೆಯ ತಂಪು', 'ಅನರ್ಥ', 'ಪುರಸ್ಕಾರ', 'ಹಣದಿ', 'ಏಳೂರ ಸರಪಂಚ', 'ಬಾಂಧವ್ಯ' 'ಸರಿದ ನಕ್ಷತ್ರ' ಹಾಗೂ 'ಕಾರ್ಗತ್ತಲೆಯಿಂದ ಮಂಜು ಬೆಳಕಿನೆಡೆಗೆ' ಮೊದಲಾದ ಕಥಾ ಸಂಕಲನಗಳನ್ನು ಹೊರತಂದರು. ವಿಶಾಲವಾದ ಜಗತ್ತನ್ನು ಕರತಲದಲ್ಲಿ ತಂದು ತೋರುವ ಮಹಾಶಕ್ತಿ ಕಥನ ಸಾಹಿತ್ಯಕ್ಕಿದೆ. ಜೀವನದ ಕಣ ಕಣಗಳನ್ನು ಎದೆ ತೆರೆದು ಕಾಣಿಸುವ ಸಣ್ಣ ಕಥೆಗಳು ಮಾನವನ ಸ್ವಭಾವವನ್ನು ಚಿತ್ರಿಸಲು ಯಶಸ್ವಿಯಾಗಿವೆ. ಅಂಥ ಕಥೆಗಾರರಲ್ಲಿ ನಿಲ್ಲಲ್ಲು ತಾವು ಪ್ರಯತ್ನಿಸಿರುವ ದೇಶಾಂಶರು ಕೆಲವು ಕಥೆಗಳನ್ನು ರಚಿಸಿದ್ದಾರೆ. ಅವರ 'ಮಾಸ್ತರನ ಮನೆ' ಸಣ್ಣ ಕಲೆಗಳ ಸಂಕಲನವು ೨೦೦೭ ರಲ್ಲಿ ಪ್ರಕಟವಾಗಿದೆ.

'ಜೀವನ ಚರಿತ್ರೆ'ಗಳ ಸಾಹಿತ್ಯವನ್ನು ಸೃಷ್ಟಿಸಿದ ಪಂಚಾಕ್ಷರಿ ಪುಣ್ಯಶೆಟ್ಟಿ, ಎಂ.ಜಿ. ಗಂಗನಪಳ್ಳಿ, ಡಾ. ಸೋಮನಾಥ ಯಳವಾರ ಅವರ ಸಾಲಿನಲ್ಲಿ ದೇಶಾಂಶ ಹುಡಗಿಯವರು ಮುಖ್ಯವಾದವರು. ಪಂಚಾಕ್ಷರಿ ಪುಣ್ಯಶೆಟ್ಟಿಯವರು ನಾವದಗಿಯ ರೇವಪ್ಪಯ್ಯ, ಭಾಲ್ಕಿ ಶ್ರೀ ಚನ್ನಬಸವ ಪಟ್ಟದ್ದೇವರು, ಮೀಸೆ ಮಹಾದೇವಪ್ಪ ಹಾಗೂ ಬಸವರಾಜ ರನ್ನು ಕುರಿತು, ಎಂ.ಜಿ. ಗಂಗನಪಳ್ಳಿಯವರು ನಾವದಗಿಯ ರೇವಪ್ಪಯ್ಯನನ್ನು ಕುರಿತು, ಸೋಮನಾಥ ಯಾಳವಾರ, ಕರಕನಳ್ಳಿ ಬಕ್ಕಪ್ಪ ಪ್ರಭು ಹಾಗೂ ಮಾಣಿಕನಗರದ ಮಾಣಿಕ ಪ್ರಭುಗಳನ್ನು ಕುರಿತು ಬರೆದಿದ್ದರೆ ದೇಶಾಂಶ ಹುಡಗಿಯವರು 'ಗ್ರಾಮ ಶಿಲ್ಪಿಗಳು', ಆಧ್ಯಾತ್ಮವಾಗಿ 'ವಿಶ್ವವಿಭೂತಿ ಮಹಾತ್ಮ ಬಸವೇಶ್ವರ', 'ಬೀದರ ಜಿಲ್ಲೆಯ ತತ್ವಪದಕಾರರು', 'ನಾ ಕಂಡ ನನ್ನವರು' ಎಂಬ ಕೃತಿಗಳನ್ನು ರಚಿಸಿದ್ದಾರೆ.

ಬೀದರ ಜಿಲ್ಲೆ ಜನಪದ ಸಾಹಿತ್ಯದ ಹುಲ್ಲುಗಾವಲು ಇಲ್ಲಿ ಜನಪದ ಸಾಹಿತ್ಯದ ಅನೇಕ ಪ್ರಕಾರಗಳನ್ನು ಈಗಾಗಲೇ ಗುರುತಿಸಲಾಗಿದೆ. "ಜಾಗತೀಕರಣದ ಬಲವಾದ ಗಾಳಿ ಬೀಸುತ್ತಿರುವ ಇಂದಿನ ಸಂದರ್ಭದಲ್ಲಿ ಇಡೀ ಜಗತ್ತು ಒಂದು ಹಳ್ಳಿಯಾಗಿ, ಜಗತ್ತಿಗೆ ಒಂದೇ ಭಾಷೆ, ಒಂದೇ ಸಂಸ್ಕೃತಿ ಎಂಬಂತೆ ಬಿಂಬಿಸುತ್ತ ಮಾರ್ಗ ಸಂಸ್ಕೃತಿಯೊಂದು ರೂಪುಗೊಳ್ಳುತ್ತಿದೆ. ಇದಕ್ಕೆ ಪರ್ಯಾವೆಂಬಂತೆ ದೇಶಿ ಸಂಸ್ಕೃತಿಯ ಉಳಿವಿಗಾಗಿ ಹಲವಾರು ಮಾರ್ಗೋಪಾಯಗಳನ್ನು ಹುಡುಕಿಕೊಳ್ಳಬೇಕಾಗುತ್ತಿದೆ[5]. ಆ ದಿಸೆಯಲ್ಲಿ ಜನಪದ ಸಾಹಿತ್ಯ ಒಂದು ಪ್ರಮುಖ ಪರಿಹಾರ. ಅಪ್ಪಟ ದೇಶಿತನದಿಂದ ಮೈದಾಳಿದುದೇ ಜಾನಪದ. ದೇಶಾಂಶ ಹುಡಗಿಯವರು ಜಾನಪದ ಹಾಡುಗಳ ಭಂಡಾರವಾಗಿದ್ದಾರೆ. ಹಿರಿಯ ಸಾಹಿತಿಯಾಗಿರುವ ಇವರು ಶ್ರಮಜೀವಿಗಳು. ಯಾವುದೇ ಉತ್ಪ್ರೇಕ್ಷೆ ಇಲ್ಲದೇ ತಮ್ಮ ಅನುಭವದ ಮೂಟೆಯಿಂದ ರಸಭರಿತವಾದ ಜನಪದ ಪ್ರಸಂಗಗಳನ್ನು ಬಿಚ್ಚಿ ಇಡುವರು. ಜಾನಪದ ಹಾಡುಗಾರರಾಗಿ ಪ್ರಸಿದ್ಧರಾದ ಹುಕ್ಕೇರಿ ಬಾಳಪ್ಪನವರಿಂದ ಪ್ರಭಾವಿತರಾಗಿ ಜಾನಪದ ಹಾಡುಗಳನ್ನು ಹಾಡುತ್ತಲೇ ಹಲವಾರು ಜಾನಪದ ಗೀತೆ, ರಂಗ ಗೀತೆಗಳನ್ನು ರಚಿಸಿ ಹಾಡಿ ಅಭಿನಯದೊಂದಿಗೆ ಕಾರ್ಯಕ್ರಮ ನೀಡುವಲ್ಲಿ ಸಿದ್ಧ ಹಸ್ತರಾಗಿದ್ದರು. ಸಾಕ್ಷರತಾ ಕಾರ್ಯಕ್ರಮದಲ್ಲಿ ತಮ್ಮನ್ನು ತೊಡಗಿಸಿಕೊಂಡು ಅಕ್ಷರ ಪ್ರಚಾರಕ್ಕಾಗಿ ಅಕ್ಷರ ಜ್ಯೋತಿ ಕವನ

---

[5] ಡಿ.ಬಿ. ನಾಯಕ – ಬುಲಾಯಿ ಹಾಡುಗಳು –೨೦೦ – ಪು.ಮುನ್ನುಡಿಯಲ್ಲಿ

ಸಂಕಲನವನ್ನು ಹೊರತಂದರು. ಆ ಗೀತೆಗಳನ್ನು ನಾಡಿನಾದ್ಯಂತ ತಾವೇ ಹಾಡಿ ಪ್ರಚಾರ ಮಾಡಿದರು. ಈ ಸಂದರ್ಭವು ಹುಡಗಿಯವರ ಸಾಹಿತ್ಯಾಸಕ್ತಿಯನ್ನು ಹುಲುಸಾಗಿ ಬೆಳೆಸಿತೆನ್ನಬಹುದು.

ದೇಶಾಂಶ ಹುಡಗಿಯವರ ಸಾಕ್ಷರತಾ ಆಂದೋಲನ ಬೀದರ ಜಿಲ್ಲೆಯಲ್ಲಿ ಮನೆಮಾತಾಗಿದೆ. ಸಾಕ್ಷರತೆ ಎಂದರೆ ಕೇವಲ ಅಕ್ಷರ ಜ್ಞಾನ ಪಡೆದುಕೊಳ್ಳುವುದಲ್ಲ, ಅದರಿಂದಾಗುವ ಸರ್ವ ಸವಲತ್ತುಗಳನ್ನು ಪಡೆದುಕೊಂಡು, ನಾಗರಿಕನಾಗುವುದಷ್ಟೇ ಅಲ್ಲದೇ ರಾಷ್ಟ್ರಾಭಿಮಾನದಿಂದ ನಾನೊಬ್ಬ ಪ್ರಜೆ ಎಂದು ಹೆಮ್ಮೆ ಪಡುವ ನಿಟ್ಟಿನಲ್ಲಿ ಬದುಕು ಸಾಗಿಸುವುದು. ಈ ಸಾಕ್ಷರತೆ ಶಬ್ದದ ಅರ್ಥವನ್ನು ಶಾಂತಪ್ಪ ದೇವರಾಯ ಮಾಸ್ತರರು ಚೆನ್ನಾಗಿ ಅರಿತುಕೊಂಡು, ಆ ನಿಟ್ಟಿನಲ್ಲಿ ತಮ್ಮ ಬದುಕು ಸಾರ್ಥಕ ಮಾಡಿಕೊಂಡಿದ್ದಾರೆ[6]. ಅವರು ಇಂಟರ್ ಓದನ್ನು ಬಿಟ್ಟು ಏಕೋಪಾಧ್ಯಾಯ ಶಾಲೆ ಮದರಗಾಂವದ ಪ್ರಾಥಮಿಕ ಶಾಲೆಗೆ ಶಿಕ್ಷಕರಾಗಿ ನೇಮಕವಾದಾಗಲೇ ಎಲ್ಲರು ತನ್ನಂತೆ ಅಕ್ಷರಸ್ಥರಾಗಬೇಕು ಎಂದು ಅನಿಸತೊಡಗಿತಂತೆ. ನಂತರದಲ್ಲಿ ಅವರ ಸಾಕ್ಷರತೆಯ ಆಂದೋಲನ ಆರಂಭಗೊಂಡಿತು. ಆಗ ೪೨ ರೂಪಾಯಿಗಳ ಸಂಭಾವನೆ ಪಡೆಯುತ್ತಿರುವ ಇವರು, ರಾತ್ರಿ ಹೊತ್ತಿನಲ್ಲಿ ಊರ ಚಾವಡಿಯ ಮೇಲೆ ಕುಳಿತು ಹರಟೆ ಹೊಡೆಯದೆ ಸಮಾಜದಲ್ಲಿ ದನಕಾಯುವ ಮಕ್ಕಳನ್ನು ಅದರಲ್ಲೂ ದಲಿತರನ್ನು ಸೇರಿಸಿಕೊಂಡು ಅಕ್ಷರ ಮಾಹಿತಿಕೊಡಲು ಪ್ರಾರಂಭಿಸಿದರು. ಈ ರೀತಿ ಅಕ್ಷರ ಜ್ಞಾನ ಪಡೆದವರಲ್ಲಿ ಹಿಂದೆ ಕರ್ನಾಟಕ ವಿಧಾನ ಸಭೆಯ ಸದಸ್ಯರಾಗಿದ್ದ ಮಹೇಂದ್ರ ಕುಮಾರರು ಒಬ್ಬರೆಂಬುದು ಗಮನಾರ್ಹ ಸಂಗತಿ. ಆ ಮೇಲೆ ಅವರು ವರ್ಗವಾಗಿ ಹೋದಲೆಲ್ಲ ವಿದ್ಯಾರ್ಥಿಗಳಲ್ಲಿ ನಮ್ಮ ಭಾಷೆ, ಸಂಸ್ಕೃತಿಯ ಅರಿವು ಮೂಡಿಸುತ್ತ ದಿನನಿತ್ಯ ಬರುವವರಿಗೆಲ್ಲ ಅಕ್ಷರ ಕಲಿಸಲು ತೊಡಗಿದರು. ಅದರಲ್ಲೂ ಅಂದು ಅತೀವ ಕುಡುಕರ, ದಲಿತರ, ಹಿಂದುಳಿದವರ, ಅನಕ್ಷರಸ್ಥರ, ಮಹಾ ರೋಗಿಗಳ ಬೀಡಾಗಿದ್ದ ಮುಡಬಿ ವಾಡಿಯನ್ನು ಅಕ್ಷರಸ್ಥ ಗ್ರಾಮವನ್ನಾಗಿಸಿದ ಕೀರ್ತಿ ಶಾಂತಪ್ಪನವರಿಗೆ ಸಲ್ಲುತ್ತದೆ[7]. ಆನಂತರ ಪೈಲೆಟ್ ಪ್ರೊಜೆಕ್ಟ್ ಇನ್ ಸೋಸಿಯಲ್ ಎಜುಕೇಶನ್ ಅಡಿಯಲ್ಲಿ ಮುಡಬಿ ವಲಯದ ಮೇಲ್ವಿಚಾರಕರಾಗಿ ಅವರು ಕೈಕೊಂಡ ವಯಸ್ಕರ ಸಾಕ್ಷರತೆಯು ಇಲ್ಲಿ ಇನ್ನೂ ಜನಮನದಲ್ಲಿ ಹಸಿರಾಗಿ ಉಳಿದಿದೆ. ಇವರು ನಡೆಸಿದ ಸಾಕ್ಷತೆ ಆಂದೋಲನದಿಂದಾಗಿ ಅನೇಕ ಮಹಿಳೆಯರು ತಾವು ಬಹುಮಾನಗಿಟ್ಟಿಸಿಕೊಳ್ಳಬೇಕೆಂಬ ಮನೋಭಾವ ಬೆಳೆಸಿಕೊಂಡರು. ಅಂಥವರಲ್ಲಿ ಇಂದು ಶಿಕ್ಷಕರಾಗಿರುವ ಉಮಾದೇವಿ ಹಲಬರ್ಗಾ ಹಾಗೂ ಕಸ್ತೂರಬಾಯಿ ಮದಕಟ್ಟಿಯವರು ಮುಖ್ಯರಾಗಿದ್ದಾರೆ.

ಕರ್ನಾಟಕ ಸರ್ಕಾರದಿಂದ ಆರಂಭವಾದ ಸಾಕ್ಷರತಾ ಆಂದೋಲದ ಹೊಣೆಹೊತ್ತು ಇವರು ಸಂಪನ್ಮೂಲ ವ್ಯಕ್ತಿಯಾಗಿ, ಪಠ್ಯ ರಚನಾ ಸಮಿತಿಯ ಸದಸ್ಯರಾಗಿ ಬೀದರ ದೀಪ ಬಂದು, ಎರಡು ಮೂರು ಎಂಬ ಮೂರು ಸಾಕ್ಷರತೆಯ ಕುರಿತಾದ ಪುಸ್ತಕ ಪ್ರಕಟಿಸಿದರು.

---

6 ಮಲ್ಲಮ್ಮಾ ಆರ್. ಪಾಟೀಲ–ಸಾಕ್ಷರತಾ ಆಂದೋಲನ ದೇಶಾಂಶ ಹುಡುಗಿ –ಚೇತನ ಚೇತನಶಿಲ್ಪಿ ಪು–೪೬

7 ಮಲ್ಲಮ್ಮ ಆರ್. ಪಾಟೀಲ – ಸಾಕ್ಷರತಾ ಆಂದೋಲನ – ಪು–೪೯.

ನಂತರ ಒಂದು ತಂಡ ಕಟ್ಟಿಕೊಂಡು ಊರು ಅಲೆದಾಡಿ ಅಕ್ಷರ ಜ್ಞಾನದ ಮಹತ್ವ ತಿಳಿಸಿ ಸಾಕ್ಷರತೆಯನ್ನು ಉಳಿಸಿ ಬೆಳೆಸಿದರು. ಈ ಹಿನ್ನೆಲೆಯಲ್ಲಿಯೇ ಅವರ 'ಅಕ್ಷರ ಜ್ಯೋತಿ' ಎನ್ನುವ ಪುಸ್ತಕ ಬಿಡುಗಡೆಯಾಯಿತು. ಆಂಧ್ರ ರಾಜ್ಯದಲ್ಲೂ ಅವರು ಮರೆಯದಂತೆ ಸಾಕ್ಷರತೆ ಕಾರ್ಯಕ್ರಮ ನೀಡಿದರು. ಮಧ್ಯ ಪ್ರದೇಶದ ಖಂಡ್ವಾ ಜಿಲ್ಲೆಗೂ ದುಭಾಷಿಯಾಗಿ ಹೋಗಿ ಬಂದರು. ಅನೇಕ ಸಾಕ್ಷರತಾ ಕಾರ್ಯಗಾರಗಳಲ್ಲಿ ಭಾಗವಹಿಸಿ ಹೆಸರು ಪಡೆದರು. ಸು. ೩೦ ವರ್ಷಗಳ ಕಾಲ ಬೀದರ ಜಿಲ್ಲೆಯಲ್ಲಿ ಸಾಕ್ಷರತಾ ಆಂದೋಲನದ ಪ್ರಮುಖ ರೂವಾರಿಯಾಗಿ ಕಾರ್ಯನಿರ್ವಹಿಸಿದ ದೇಶಾಂಶರದು, ಇದೊಂದು ಅವಿಸ್ಮರಣೀಯ ಕ್ಷೇತ್ರ. ಈ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗಲೇ ನಿವೃತ್ತರಾದ ಅವರು ಆ ಮೇಲೆ ಸಾಹಿತ್ಯ ಕ್ಷೇತ್ರ ಪ್ರವೇಶಿಸಿ ಅದಕ್ಕೊಂದು ಸೈನ್ಯವನ್ನು ನಿರ್ಮಿಸಲು ಕನ್ನಡ ಧರಿನಾಡು ಸಂಘವನ್ನು ಕಟ್ಟಿದರು.

ದೇಶಾಂಶರು ಯುವಕರಿಗೆ ಚಿಮ್ಮುವ ಚಿಲುಮೆಯಾಗಿದ್ದಾರೆ. ಯುವ ಕವಿ ಕವಿಯತ್ರಿಯವರಿಗೆ ಕವಿತಾ ರಚನೆ ಮತ್ತು ಗದ್ಯ ಲೇಖನದ ಕಾರ್ಯಗಾರವನ್ನು ನಡೆಸಲು ಹಲವಾರು ಸಲ ಯೋಚಿಸಿದವರು. ಈ ಕಾರ್ಯಕ್ಕಾಗಿಯೇ ೧೯೯೯ ರಲ್ಲಿ ಧರಿನಾಡು ಕನ್ನಡ ಸಂಘ ಸ್ಥಾಪಿಸಿ ಅದರ ಸಂಸ್ಥಾಪಕ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರೊಬ್ಬ ಅಪ್ಪಟ ಕನ್ನಡಾಭಿಮಾನಿ ಸೇವಾ ನಿಷ್ಠತೆ, ಸೇವಾ ಮನೋಭಾವ, ಮತ್ತು ಹೃದಯ ವೈಶಾಲ್ಯತೆಯನ್ನು ಹೊಂದಿರುವ ಅವರು ಈ ಪ್ರದೇಶದ **ಚೇತನ ಶಿಲ್ಪಿ**ಯಾಗಿದ್ದುಕೊಂಡು ಸಮಾಜ ಸೇವೆ ಮಾಡಿದ್ದಾರೆ. ಯುವ ಬರಹಗಾರರಿಗೆ ಪ್ರೋತ್ಸಾಹಿಸುವಲ್ಲಿ, ಈ ಭಾಗದ ಕನ್ನಡ ಎಲೆ ಮರೆಯ ಕಾಯಂತಿದ್ದ ಪ್ರತಿಭಾನ್ವಿತ ಕವಿಗಳನ್ನು ಹುಡಕಿ ಅವರ ಕೃತಿಗಳನ್ನು ಬೆಳಕಿಗೆ ತರುವಲ್ಲಿ **ಧರಿನಾಡು ಕನ್ನಡ ಸಂಘದ** ಪಾತ್ರ ಬಹು ಮುಖ್ಯವಾಗಿದ್ದು, ಇದು ದೇಶಾಂಶ ಹುಡಗಿಯವರ ಸಾಹಿತ್ಯ ಸಾಧನೆಯ ಬೆನ್ನೆಲುಬೂ ಆಗಿರುವುದನ್ನು ಮರೆಯಲಾಗದು.

ದೇಶಾಂಶರ ಸಾಹಿತ್ಯ ಶಕ್ತಿಯ ಕೆಲವು ಕಣಗಳು ಅವರು ಸೇವೆ ಸಲ್ಲಿಸಿದ ಬೀದರ ಜಿಲ್ಲೆಯ ಪತ್ರಿಕಾ ರಂಗದಿಂದಲೂ ಹಾಗೂ ರಂಗ ವೇದಿಕೆಯಿಂದಲೂ ಮೂಡಿ ಬಂದಿರುವುದೆನ್ನು ಗುರುತಿಸಬಹುದಾಗಿದೆ. ೧೯೬೮ ರಲ್ಲಿ ಅವರು ಸೇಡಂ ಶಾಲೆಯ ಕೈಬರಹದ ಪತ್ರಿಕೆಗೆ ಸಂಪಾದಕರಾಗಿ ೧೯೬೮ ರಲ್ಲಿ ಮುಡಬಿ ಶಾಲೆಯ ಕೈಬರಹದ ಪತ್ರಿಕೆಗೆ ಸಂಪಾದಕರಾಗಿ ೧೯೯೪ ರಿಂದ **ಅಕ್ಷರ ಕಾರಂಜಾ** ಸಾಕ್ಷರತಾ ಪತ್ರಿಕೆ ಬೀದರದ ಸಂಪಾದಕರಾಗಿ ೧೯೮೮ ರಿಂದ ೯೯ ರ ವರೆಗೆ **ಶಾಂತಿ ಕಿರಣ** ದ್ವೈಮಾಸಿಕ ಪತ್ರಿಕೆ ಸಹ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ಅಂತೆಯೋ ೧೯೬೮ ರಿಂದ **ವಿಶ್ವ ಕಲ್ಯಾಣ** ವಾರ ಪತ್ರಿಕೆಯ ಬರಹಗಾರರಾಗಿ ಅದರಲ್ಲಿ ಅನೇಕ ಕವನಗಳನ್ನು ಬರೆದು ಪ್ರಕಟಿಸಿದರು. ೧೯೯೪ ರ ವರೆಗೆ **ಪಬ್ಲಿಕ್ ಪತ್ರಿಕೆಯ** ನಿರಂತರ ಬರಹಗಾರರಾಗಿ ಅನೇಕ ಕಥೆ, ಕವನಗಳನ್ನು ಪ್ರಕಟಗೊಳಿಸಿದರು. **ಉತ್ತರ ಕರ್ನಾಟಕ** ಪತ್ರಿಕೆಯ ಸಾಹಿತ್ಯ ಅಂಕಣಕಾರರಾಗಿ ೨ ವರ್ಷ ಅನೇಕ ಲೇಖನಗಳನ್ನು ಬರೆದರು. ವಚನಕ್ರಾಂತಿಯಲ್ಲಿ ಅವರ ರುಬಾಯಿಗಳು, ವಚನಗಳು,

ಪ್ರಕಟವಾದವು. ಈ ಪತ್ರಿಕೆಯಲ್ಲಿ ಪ್ರಕಟಿಸಿದ ಹೊಸ ಹೊಸ ಕವಿಗಳ ಭಾವಚಿತ್ರದ ಪರಿಚಯದೊಂದಿಗಿನ ಅವರ ಕವನಗಳು ಬಹುಜನರ ಮೆಚ್ಚುಗೆ ಗಳಿಸಿದವು.

ಸ್ವಾತಂತ್ರ್ಯ ಪೂರ್ವದ ಹೈದ್ರಾಬಾದ ನಿಜಾಮರ ಆಳ್ವಿಕೆಯ ನೋವು ನಲಿವು ಕಂಡು ಬೆಳೆದವರು. ಹುಡಗಿಯವರು ಉರ್ದು, ಮರಾಠಿ, ಹಿಂದಿ ಭಾಷೆಗಳ ಪ್ರಭಾವದಿಂದಾಗಿ ಶೋಚನೀಯ ಸ್ಥಿತಿಯಲ್ಲಿದ್ದ ಕನ್ನಡವನ್ನು ದಷ್ಟ ಪುಷ್ಟಗೊಳಿಸಲು ಪ್ರಯತ್ನಿಸಿದ 'ದೇಶಾಂಶ'ರ ಶ್ರಮ ಸ್ಮರಣೀಯವಾದುದು. ಹುಡಗಿ ಗ್ರಾಮದಲ್ಲಿ ನಾಟಕ ತಂಡ ಕಟ್ಟಿ ಕನ್ನಡ ನಾಟಕಗಳನ್ನು ನಿರ್ದೇಶಿಸಿ, ಪಾತ್ರ ವಹಿಸಿ ಪ್ರದರ್ಶಿಸಿದ್ದುದು ಒಂದು ಸಾಹಸವೆನ್ನಬೇಕು. ೧೯೫೧ ರಲ್ಲಿ 'ಗಾಂಧಿ ಟೋಪಿ' ನಾಟಕದೊಂದಿಗೆ 'ರಂಗಭೂಮಿ' ಪ್ರವೇಶಿಸಿದ ದೇಶಾಂಶರು, ೧೯೫೬ ರಲ್ಲಿ ಅಶಿಕ್ಷಿತರಗೋಳು, ೧೯೫೭ **ರಕ್ತದೀಪ**, ೧೯೫೮ ರಲ್ಲಿ **ಪ್ರಪಂಚ ಪರೀಕ್ಷೆ**, **ಪ್ರೇಮ ಬಂಧನ**, **ಸುನಂದಾ** ಹೀಗೆ ಹತ್ತಾರು ನಾಟಕಗಳಲ್ಲಿ ಅಭಿನಯಿಸಿ ಹಾಸ್ಯ ಪಾತ್ರ ಮಾಡಿ ಸೈ ಎನಿಸಿಕೊಂಡರು. ೧೯೬೩ ರಲ್ಲಿ ಬೀದರನಲ್ಲಿ ಮಾಡಲಾದ ಉತ್ಪಲದತ್ತರ 'ಸೂರ್ಯಶಿರಾರಿ' ನಾಟಕದಲ್ಲಿ ಬೌದ್ಧ ಭಿಕ್ಷು ಕಲ್ಹಣನ ಪಾತ್ರ ಮಾಡಿ ತಮ್ಮ ವಿಶಿಷ್ಟ ಛಾಪು ಮೂಡಿಸುವಲ್ಲಿಯೂ ಯಶಸ್ವಿಯಾದರು. ಅವರ ಸದಾ ಅಧ್ಯಯನಶೀಲತೆಗೆ ದೀವಿಗೆ ಹಿಡಿದ ಈ ರಂಗಸಿರಿಯು ದೇಶಾಂಶರು ಸಾಹಿತ್ಯಿಕವಾಗಿಯೂ ಸ್ವತಯುತವಾಗಿ ಬರೆಯಲು ಹಾಗೂ ಬೆಳೆಯಲೂ ಕಾರಣೀಭೂತವಾಯಿತೆನ್ನಬಹುದು.

ಈ ಎಲ್ಲಾ ಹಿನ್ನೆಲೆಗಳು ಸೃಜನಶೀಲ ಮನಸ್ಸಿನ ಕವಿಗೆ ಹೊಸ ಚಿಂತನೆ, ವಿಷಯ ವೈವಿಧ್ಯತೆ, ನಿರೂಪಣೆಯಲ್ಲಿ ವಿಶಿಷ್ಟತನ ರೂಪಿಸಲು ಪ್ರತ್ಯಕ್ಷವಾಗಿಯೂ ಕೆಲವೊಮ್ಮೆ ಪರೋಕ್ಷವಾಗಿಯೂ ಕಾರಣವಾಗಿರುವುದನ್ನು ಅಲ್ಲಗಳೆಯಲಾಗದು. ನವ್ಯ ಸಂದರ್ಭದ ಮುಕ್ತ ಆಲೋಚನೆ, ಸಾಮಾಜಿಕ ಕಾಳಜಿ ಹಾಗೂ ಕಾವ್ಯಗಳಲ್ಲಿಯ ಪ್ರಗತಿ ಪರತೆ ಮತ್ತು ಅಭಿವ್ಯಕ್ತಿಯನ್ನು ಗುರುತಿಸಲು ದೇಶಾಂಶರ ಬದುಕು-ಬರಹಗಳ ಹಿನ್ನೆಲೆಯಲ್ಲಿ ಅವರ ಕೃತಿಗಳಲ್ಲಿಯ ಆಶಯಗಳನ್ನು ಅರಿತುಕೊಳ್ಳಲು ಈ ಅಧ್ಯಯನದ ಪೂರ್ವ ಪ್ರವೇಶಿಕೆ ಮಾರ್ಗದರ್ಶಿಯಾಗುತ್ತದೆಂದು ಆಲೋಚಿಸಲಾಗಿದೆ. ಇಂತಹ ಒಂದು ಸಾಹಿತ್ಯ ಪರಂಪರೆಯಲ್ಲಿ ಪ್ರಮುಖರಾದ ದೇಶಾಂರ ಬದುಕು-ಬರಹಗಳನ್ನು ಕುರಿತು ಮುಂದಿನ ಅಧ್ಯಾಯಗಳಲ್ಲಿ ಅಧ್ಯಯನ ಮಾಡಲಾಗಿದೆ.

# ದೇಶಾಂಶ ಹುಡಗಿಯವರ ಜೀವನ ಮತ್ತು ಸಾಧನೆ

ಸಾಹಿತ್ಯ ಸಂಶೋಧನೆಯಲ್ಲಿ ಒಬ್ಬ ಲೇಖಕನ ಸಮಗ್ರ ಸಾಹಿತ್ಯ ಕೃತಿಗಳ ಕುರಿತು ಅಧ್ಯಯನ ಕೈಗೊಳ್ಳುವ ಸಮಯದಲ್ಲಿ ಒಂದು ಪ್ರಶ್ನೆ ಎದ್ದು ನಿಲ್ಲುತ್ತದೆ. ಅದೆಂದರೆ ಲೇಖಕನ ಸಾಹಿತ್ಯ ಮುಖ್ಯವೋ? ಅಥವಾ ಸಾಹಿತ್ಯ ರಚನೆಗೆ ಕಾರಣವಾಗಿರುವ ಆತನ ಜೀವನ ವಿಧಾನ ಮುಖ್ಯವೋ? ಎಂಬುದು. ಇದನ್ನು ಕುರಿತು ಚರ್ಚಿಸುವ ಹಲವರು ಇಲ್ಲಿ ಎರಡೂ ಮುಖ್ಯವೆಂದೇ ತೀರ್ಮಾನಿಸುತ್ತಾರೆ. ಯಾಕಂದರೆ "ಸಾಹಿತಿ ಅಥವಾ ಕಲಾವಿದ ಕೇವಲ ಒಬ್ಬ ವ್ಯಕ್ತಿಯಾಗಿರದೆ ತಾನು ಬದುಕವ ಪ್ರದೇಶದ ಸಾಂಸ್ಕೃತಿಕ ಪ್ರತಿನಿಧಿಯಾಗಿರುತ್ತಾನೆ. ತನ್ನ ಕೃತಿಗಳ ಮೂಲಕ ಸಮಕಾಲಿನ ಸಾಮಾಜಿಕ ವ್ಯವಸ್ಥೆಯ ವೈರುಧ್ಯಗಳನ್ನು, ನಾಡಿನ ಇತಿಹಾಸವನ್ನು ಮತ್ತು ಜನ ಸಾಮಾನ್ಯರ ಬದುಕಿನ ಚರಿತ್ರೆಯನ್ನು ದಾಖಲಿಸುತ್ತಾನೆ. ಜೊತೆಗೆ ಒಂದಿಲ್ಲೊಂದು ರೀತಿಯಿಂದ ಕೃತಿಯಲ್ಲಿ ತಾನೂ ಕಾಣಿಸಿಕೊಳ್ಳುತ್ತಾನೆ. ಆದ್ದರಿಂದ ಕವಿಯ ಸಮಗ್ರ ಕೃತಿಗಳ ಅಧ್ಯಯನಕ್ಕೆ ತೊಡಗುವುದೆಂದರೆ, ಒಂದು ಪ್ರದೇಶದ, ಸಾಂಸ್ಕೃತಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಅಧ್ಯಯನಕ್ಕೆ ಒಳಪಡಿಸಿದಂತಾಗುತ್ತದೆ[1]". ಈ ಎಲ್ಲಾ ಕಾರಣಗಳಿಂದಾಗಿ ಸಾಹಿತಿಯೋರ್ವನ ಬರಹವನ್ನು ಬದುಕಿನಿಂದ ಪ್ರತ್ಯೇಕಿಸಿ ನೋಡುವುದು ಸರಿಯಾದ ರೀತಿ ಅಲ್ಲವೆಂದು ಹೇಳಲಾಗುತ್ತದೆ.

ಕಲೆಗಾರ ಅಥವಾ ಸಾಹಿತಿಯಾದವನು ತನ್ನ ಕೃತಿಯ ಸೃಷ್ಟಿಯ ಜೊತೆಗೆ ವೈಯಕ್ತಿಕ ಆನಂದವನ್ನು ಪಡೆದೇ ತಿರುತ್ತಾನೆ. ಆ ಮೂಲಕ ಓದುಗರ ಬಳಕ್ಕೂ ಆತ ಆ ಆನಂದವನ್ನು ನೀಡುವ ವಿಶಿಷ್ಟ ಕಲೆಯನ್ನು ಜೀವನದಲ್ಲಿ ರೂಢಿಸಿಕೊಂಡಿರುತ್ತಾನೆ. ಹೀಗಾಗಿ ಸಾಮಾಜಿಕ ಜೀವಿ ಎನಿಸುವ ಆತನ ವಿಶಿಷ್ಟ ವ್ಯಕ್ತಿತ್ವವನ್ನು ಆತ ಗಳಿಸಿದ ಪರಿಸರ, ವಿದ್ಯೆ, ಸಾಮಾಜಿಕ ಸಂಸ್ಕಾರಗಳ ಹಿನ್ನೆಲೆಯಲ್ಲಿ ಪರಿಗಣಿಸಬೇಕಾಗಿರುವುದರಿಂದ ಬೀದರ ಜಿಲ್ಲೆಯ ಪ್ರಸಿದ್ಧ ಕವಿಯಾಗಿರುವ 'ದೇಶಾಂಶ' ಹುಡಗಿಯವರನ್ನು ರೂಪಿಸಿದ ಅವರ ಮನೆತನ, ತಂದೆ-ತಾಯಿ, ಬಾಲ್ಯ ಜೀವನ, ಶಿಕ್ಷಣ, ಸಾಹಿತ್ಯಿಕ ವಾತಾವರಣ ಮೊದಲಾದವುಗಳನ್ನು ಈ ಅಧ್ಯಾಯದಲ್ಲಿ ವಿವರವಾಗಿ ಗಮನಿಸಲಾಗಿದೆ.

---

[1] ಆರ್.ಸಿ. ಹಿರೇಮಠಃ ಸಾಹಿತ್ಯ ವಿಮರ್ಶೆ-೧೯೬೯ ಪು. ೮೯.

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಸಾಹಿತ್ಯ ಲೋಕಕ್ಕೆ ಜಗನ್ಮಾನ್ಯತೆ ದೊರಕಿಸಿಕೊಟ್ಟ ಕವಿಗಳು ಹಲವರು ಅಂಥವರಲ್ಲಿ ಕನ್ನಡ ನಾಡು ನುಡಿ ಸಂಸ್ಕೃತಿಗಳಿಗೆ ಹಾಗೂ ಸಾಹಿತ್ಯದ ಏಳ್ಗೆಗಾಗಿ ಅವಿರತವಾಗಿ ಶ್ರಮಿಸಿ ಖ್ಯಾತಿಗೆ ಪಾತ್ರರಾದವರಲ್ಲಿ ಶ್ರೀ ಶಾಂತಪ್ಪ ಶರಣಪ್ಪ ದೇವರಾಯ ಒಬ್ಬರು. ಅವರು ಕೇವಲ ಸಾಹಿತ್ಯ ಸೃಷ್ಟಿಯಲ್ಲಿ ತೊಡಗದೆ. ವೃತ್ತಿ ಜೊತೆಗೆ ಸಮಾಜ ಚಿಂತಕರಾಗಿ ಕನ್ನಡದ ಲೇಖಕರಾಗಿ ಕವಿಗಳಾಗಿ ಜನಪದ ಹಾಡುಗರರಾಗಿ ಕನ್ನಡದ ಬಗ್ಗೆ ಮಮ್ಮಲ ಮರಗಿ ಒಂದು ಕ್ರಾಂತಿ ಮಾಡಿದ್ದಾರೆ"[2].

ಶೈಕ್ಷಣಿಕ ರಂಗದಲ್ಲಿ ಅವಿರತ ಪರಿಶ್ರಮ ನಿಷ್ಕಲ್ಮಷ ಸೇವೆ, ನಿಷ್ಠೆಯಿಂದಲೇ ಜಿಲ್ಲೆಯ ಸಾಹಿತಗಳ ಸಾಲಿಗೆ ಸೇರಿದ ಗಡಿನಾಡಿನ ಗಾರುಡಿಗರೆನಿಸಿದ್ದಾರೆ. ಅಷ್ಟೆ ಅಲ್ಲದೇ ಜವಾಬ್ದಾರಿಯುತ ಪ್ರಜೆಯಾಗಿ ಸಾಹಿತ್ಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಧರಿನಾಡು ಕನ್ನಡ ಸಂಘದ ಸ್ಥಾಪನೆಗೆ ಕಾರಣೀಕರ್ತರಾಗಿದ್ದಾರೆ. ಅವರ ಆದರ್ಶ ಚರಿತ್ರೆಯನ್ನು ಕೇಳುತ್ತಾ ಹೋದಂತೆ ಅವರ ಬದುಕಿನ ಒಂದೊಂದು ಅಧ್ಯಾಯನಗಳು ತೆರೆಯುತ್ತಾ ಸಾಗುತ್ತವೆ ಎಂಬುದನ್ನು ನಾವಿಲ್ಲಿ ಅರಿಯಬಹುದಾಗಿದೆ.

## ಮನೆತನಃ

'ದೇಶಾಂಶ ಹುಡಗಿ' ಎಂಬ ಕಾವ್ಯನಾಮದಿಂದ ಸುವಿಖ್ಯಾತರಾದ ಶಾಂತಪ್ಪ ಶರಣಪ್ಪ ದೇವರಾಯ ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ 'ಹುಡಗಿ' ಗ್ರಾಮದವರು ಹುಡಗಿ ಸಾಕಷ್ಟು ಭೂಸಂಪತ್ತು ಜಲಸಂಪತ್ತನ್ನು ಪಡೆದಿದೆ. ಊರಿನ ಜನ – ದನಗಳ ನೀರಡಿಕೆಯನ್ನು ಹಿಂಗಿಸಲು ಊರು ಎರಡೂ ಮಗ್ಗಲು ಚಿಕ್ಕಹಳ್ಳ, ದೊಡ್ಡ ಹಳ್ಳಿಗಳವೆ. ಮುಂಬೈ ಹೈದ್ರಾಬಾದ ಮಹಾಮಾರ್ಗದಲ್ಲಿ ಬರುವ ಹುಡಗಿ ಗ್ರಾಮ ಸಾಂಸ್ಕೃತಿಕವಾಗಿ ಮಹತ್ವ ಪಡೆದ ಊರಾಗಿದೆ. ಇಲ್ಲಿಯ ರೈತರು ಬೆವರು ಸುರುಸಿ ಬೆಣ್ಣೆಯನ್ನು ಪಡೆಯುವ ಪರಿಶ್ರಮಗಳಾಗಿದ್ದಾರೆ. ಹುಡುಗಿಯ ರಸಭರಿತ ಮಾವಿನ ಹಣ್ಣು ಹೈದ್ರಾಬಾದಿನವರೆಗೆ ಹೆಸರುವಾಸಿ, ಈ ಗ್ರಾಮ ಶೈಕ್ಷಣಿಕವಾಗಿ ಹಿಂದುಳಿದಿಲ್ಲ. ಈ ಗ್ರಾಮದಲ್ಲಿ ಹಿಂದೂ ಮುಸ್ಲಿಂ ಬ್ರಾಹ್ಮಣರು ಕ್ರಿಶ್ಚಿಯನ್ನರು ಬಡವ ಬಲ್ಲಿದರು ಎಲ್ಲರೂ ಒಂದೇ ಎಂಬ ಸಹ ಬಾಳ್ವೆಯನ್ನು ನಡೆಸುತ್ತಿರುವರು. ಇಂತಹ

---

[2] ಶಿವಶಂಕರ ಟೋಕರೆ – 'ಚೇತನ ಶಿಲ್ಪಿ' ೨೦೦೫ ಪು. ೨೪.

ಗ್ರಾಮದಲ್ಲಿ ಜನಿಸಿದ ಶ್ರೀ ಶಾಂತಪ್ಪ ಶರಣಪ್ಪ ದೇವರಾಯ ಅವರ ಮನೆತನಕ್ಕೆ ಒಂದು ವಿಶೇಷತೆ ಇದೆ.

ಹುಡುಗಿ ಗ್ರಾಮದ ಪೋಲಿಸ ಗೌಡರು ಮನೆತನದ ಶಾಖೆಯೇ ಮುಂದೇ 'ದೇವರಾಯ' ಮನೆತನವೆಂಬ ಖ್ಯಾತಿ ಪಡೆಯಿತು. ೧೯೫೦ ರಿಂದಿಚೆಗೆ ಬಿರಾದರ ಪೋಲಿಸ್ ಪಾಟೀಲ ಎಂಬುದನ್ನು ಮರೆತು ದೇವರಾಯ ಮನೆತನವೆಂದೇ ಮುಂದುವರೆಯಿತು. ಏಕೆಂದರೆ ಆ ಮನೆತನದಲ್ಲಿ ದೇವರಾಯ ಗೌಡ / ದೇವಪ್ಪ ಗೌಡ ಎಂಬ ಪ್ರಸಿದ್ಧ ಗೌಡರು ಆಗಿ ಹೋಗಿದ್ದರು. ಅವರ ಹೆಸರಿನ ಪ್ರತಿತಿಯಿಂದಾಗಿ ಈ ಮನೆತನಕ್ಕೆ ದೇವರಾಯ ಎಂಬ ಹೆಸರು ಬಂತು. ಈ ಮನೆತನವು ಆಚಾರ, ವಿಚಾರ ರೀತಿ–ನೀತಿಗಳಿಂದ ವಿಶಿಷ್ಟತೆ ಪಡೆದಿದೆ. ಆ ಗ್ರಾಮದ ಜನರಲ್ಲಿ ಈ ಮನೆತನ ಬಗ್ಗೆ ಗೌರವಾಭಿಮಾನ ತುಂಬಾ ಇರುವುದನ್ನು ಇಂದಿಗೂ ಕಾಣಬಹುದು. ಇಂಥ ಗೌರವಾನ್ವಿತ ಮನೆತನದಲ್ಲಿ ಜನಿಸಿದವರು 'ದೇಶಾಂಶ'ರು ಎನ್ನಬಹುದು.

## ಬಾಲ್ಯ ಜೀವನ:

ಶಾಂತಪ್ಪ ದೇವರಾಯರ ತಂದೆ ಶರಣಪ್ಪ ದೇವರಾಯ ತಾಯಿ ಭೀಮಬಾಯಿ ದೇವರಾಯ ಬಹಳ ಸರಳ ಜೀವಿಗಳು ಹಾಗೂ ಸುಖಮಯ ಜೀವನವನ್ನು ನಡೆಸಿಕೊಂಡು ಹೋಗುತ್ತಿದ್ದರು. ಇವರಿಗೆ ಒಟ್ಟು ಏಳು ಜನ ಮಕ್ಕಳಿದ್ದರು. ಇಬ್ಬರು ಹೆಣ್ಣು ಮಕ್ಕಳು ಐದು ಜನ ಗಂಡು ಮಕ್ಕಳು ಕ್ರಮವಾಗಿ– ಗುರಮ್ಮಾ, ಶಾಂತಪ್ಪ, ಮಾಣಿಕಪ್ಪಾ, ಪುತಿಳಿಬಾಯಿ, ಶಾಮರಾಯ, ಅಣ್ಣರಾಯ, ಅಪ್ಪರಾಯ ಇವರಲ್ಲಿ ಎರಡನೆಯವರಾದ ಶಾಂತಪ್ಪ ದೇವರಾಯ ಎಂಬುವರೇ 'ದೇಶಾಂಶ ಹುಡಗಿ' ಎಂದು ಪ್ರಸಿದ್ಧರಾದರು. ಸುಮಾರು ೧೯೩೦ ರಿಂದ ೧೯೩೬ ರ ಅವಧಿಯಲ್ಲಿ ಹುಡುಗಿ ಗ್ರಾಮ ಹಾಗೂ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಗಡ್ಡೆಬೇನೆ (ಪ್ಲೇಗ್) ಹಾವಳಿ ಹೆಚ್ಚಾಗಿತ್ತು. ಇಂತಹ ಸಂದರ್ಭದಲ್ಲಿ ಜನರು ಪ್ರಾಣ ಉಳಿಸಿಕೊಳ್ಳಲು ಹೋಲಗದ್ದೆಗಳಲ್ಲಿ ಬೀಡು ಬಿಟ್ಟಿದರು. ಹಾಗೊಮ್ಮೆ ಊರು ಬಿಟ್ಟು ಅಡವಿಯಲ್ಲಿ ದೇವರಾಯ ಮನೆತನದವರು ವಾಸ ಮಾಡಿರುವಾಗ ಶಾಂತಪ್ಪ ದೇವರಾಯ ಅವರು ೬–೧೧–೧೯೩೪ ರಲ್ಲಿ ಜನಿಸಿದರು. ಆ ಕಾರಣ ಇವರಿಗೆ ಅಡಿವೆಪ್ಪ ಎಂದು ಕರೆದರು. ಮುಂದೇ ನಾಮಕರಣದಲ್ಲಿ ಶಾಂತಪ್ಪ ಎಂದು ಹೆಸರಿಸಲಾಯಿತು. ಇವರದು ಬಡವ ಶ್ರೀಮಂತರೊಂದಿಗೆ ಬೆರೆತ ಜೀವನವಾಗಿತ್ತು.

## ಶಿಕ್ಷಣ:

ಶಾಂತಪ್ಪ ದೇವರಾಯ ಅವರಿಗೆ ಮನೆಯೇ ಮೊದಲ ಪಾಠ ಶಾಲೆಯಾಗಿತ್ತು. ತಂದೆ ಶರಣಪ್ಪ ದೇವರಾಯರೇ ಆಗಿನ ಕಾಲದಲ್ಲಿ ಕನ್ನಡ ಕಲಿಸಿದ ಮೊದಲ ಗುರು. ಪ್ರಾಥಮಿಕ ಹಂತದಲ್ಲಿ ಶ್ರೀ ದೇವಿಂದ್ರಪ್ಪ ಬಡಿಗೇರ ಖಾಸಗಿ ಶಾಲೆಯಲ್ಲಿ ಕನ್ನಡ ಮರಾಠಿ ಮೋಡಿ ಲಿಪಿಗಳನ್ನು ಕಲಿಸಿದರು. ಶ್ರೀ ಬಸವಣಪ್ಪ ಹೂಗಾರ ಹಾಗೂ ರೇವಣಪ್ಪಾ ಹೂಗಾರ ಇಂಗ್ಲೀಷ, ಉರ್ದು ಶಿಕ್ಷಣ ನೀಡಿದರು. ಸ್ವ ಗ್ರಾಮದಲ್ಲಿ ಮಾಧ್ಯಮಿಕ ಶಿಕ್ಷಣದ ಅನುಕೂಲತೆ ಇಲ್ಲದ ಕಾರಣ ಅಭ್ಯಾಸಕ್ಕಾಗಿ ಚಿಟಗುಪ್ಪಾಕ್ಕೆ ಹೋಗಿ ಅನೇಕ ಕಷ್ಟಗಳನ್ನು ಅನುಭವಿಸಬೇಕಾಯಿತು.

ಇಂತಹ ಸಂದರ್ಭದಲ್ಲಿ ರಾಜಾರಾಮ ಪಂಡಿತ ಹಾಗೂ ಅನುಸೂಯಾ ದಂಪತಿಗಳು ಅವರ ಓದಿಗೆ ಸಹಕರಿಸಿದರು. ಶಾಂತಪ್ಪ ದೇವರಾಯ ಅವರ ಪ್ರೌಢ ಶಿಕ್ಷಣವು ಸಹ ಅನೇಕ ಏರು ಪೇರುಗಳಿಂದ ಕೂಡಿತ್ತು. ಆದರೂ ಅವರು ಬಾಳಿನಲ್ಲಿ ಸೋಲದೆ ಛಲದಂತ ಮಲ್ಲನಂತೆ ಜೀವನ ಚಕ್ರದೊಂದಿಗೆ ಎಡ ಬಿಡದೇ ತಿರುಗಿದರು. ಪ್ರೌಢ ಶಾಲಾ ಅಭ್ಯಾಸವನ್ನು (೧೯೫೦-೧೯೫೪) ಅನೇಕ ನೋವು ನಲಿವುಗಳೊಂದಿಗೆ ಸರಕಾರಿ ಪ್ರೌಢ ಶಾಲೆ ಸೇಡಂದಲ್ಲಿ ಮುಗಿಸಿದರು. ಶಾಂತಪ್ಪ ದೇವರಾಯ ಅವರಿಗೆ ಓದಿಸಿ ಅನ್ನ ಹಾಕಿ ಸಲಹಿ ದವರೆಂದರೆ ದಿ ರಾಜಾರಾಮ ಪಂಡಿತ ನಂದಗಾಂವ (ಚಿಟಗುಪ್ಪ) ಲಿಂ. ವೀರಭದ್ರಪ್ಪ ಉನ್ನಿ ಚಿಟಗುಪ್ಪ ಲಿಂ. ಶರಣಪ್ಪಾ ಬೋಳದ ಸೇಡಂ, ಶ್ರೀ ಶಿವರುದ್ರಪ್ಪ ಬೋಳದ ಸೇಡಂ, ವಿ. ವೆಂಕಟರಾಯ ಕುಲಕರ್ಣಿ, ಲಿಂ. ಬಸವಲಿಂಗಪ್ಪ ಮಂಗಲಗಿ ಸೇಡಂ, ಲಿಂ. ಚಂದ್ರಪ್ಪ ಯಾಕತಪೂರ ಸೇಡಂ, ಹುಡುಗಿ (ಹೈದ್ರಾಬಾದ) ಇಂಟರ್ ಮಿಡಿಯಟ್ ಅಭ್ಯಾಸಕ್ಕಾಗಿ ಹೈದ್ರಾಬಾದಗೆ ಪ್ರಯಾಣ. ಅಲ್ಲಿ ನಿಜಾಮ್ ಕಾಲೇಜು ಹೈದ್ರಾಬಾದದಲ್ಲಿ ಪ್ರಾಣಿ ಶಾಸ್ತ್ರದ ವಿದ್ಯಾರ್ಥಿಯಾಗಿ ಎರಡು ತಿಂಗಳು ಕಳೆದವು. ವರ್ಗ ಶುಲ್ಕ ಕೊಡಲಾಗದ ಕಾರಣದಿಂದ ಅವರನ್ನು ಹೊರಹಾಕಲಾಯಿತು. ನಂತರ ವಿವೇಕ ವರ್ದಿನಿ ಕಾಲೇಜು ಹೈದ್ರಾಬಾದನಲ್ಲಿ ಇಂಟರ್ ಕಲಾ ವಿದ್ಯಾರ್ಥಿಯಾಗಿ ಇತಿಹಾಸ, ನಾಗರಿಕಶಾಸ್ತ್ರ ಹಾಗೂ ಕನ್ನಡ ವಿದ್ಯಾರ್ಥಿಯಾಗಿ ಮುಂದುವರೆದರು. ಅನಾರೋಗ್ಯದ ಕಾರಣ ಕಾಲೇಜು ಬಿಟ್ಟು ಬರಬೇಕಾಯಿತು. ೧೯೫೯-೬೦ ರಲ್ಲಿ ಸಾಹಿತ್ಯ ಸಮ್ಮೇಲನ ಪ್ರಮಾಗದಿಂದ ಸಾಹಿತ್ಯ ವಿಶಾರದ ಪಾಸಾದರು. ೧೯೭೦-೭೧ ರಲ್ಲಿ ಮಧ್ಯೆ ಪ್ರದೇಶದ ಇಂದೂರಿನಿಂದ ಇಂಟರ್ ಮಿಡಿಯಟ್ ಪಾಸಾಗಿ, ೧೯೬೦-೬೨ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ

ಬಾಹ್ಯ ವಿದ್ಯಾರ್ಥಿಯಾಗಿ ಬಿ.ಎ. ಪಾಸಾದರು. ೧೯೬೧ ರಲ್ಲಿ ಅವರು ಗುಲಬರ್ಗಾದ ಸರಕಾರಿ ಬಿ.ಇಡಿ. ಕಾಲೇಜಿನಿಂದ ಬಿ.ಇಡಿ. ಪಾಸಾದರು.

ಇದೆಲ್ಲ ಗಮನಿಸಿದರೆ ದೇಶಾಂಶರ ಬಾಲ್ಯ ಜೀವನವು ಅವರಿಗೆ ಕಲ್ಲು ಮುಳ್ಳಿನ ದಾರಿಯಾಗಿತ್ತು. ಅದು ಅವರಿಗೆಂದೂ ಸುಖದ ಸುಪ್ಪತ್ತಿಗೆಯಾಗಲಿಲ್ಲ. ಆದೊಂದು ವಿಷದ ಬಟ್ಟಲಾಗಿತ್ತು. ಆದರೆ ಅವರೆಂದೂ ಬಾಳಿನಲ್ಲಿ ಸೋತಿಲ್ಲ. ಅವರು ಬಾಳನ್ನು ಸಡ್ಡು ಹೊಡೆದು ಎದುರಿಸಿದ ಹುಡಗಿಯ ಹುಡುಗರೆನಿಸಿದರು[3] ಎಂಬ ಹಿರಿಯರ ಮಾತು ಸತ್ಯವಾಗಿದೆ.

ದೇಶಾಂಶರು ಪ್ರಾಥಮಿಕ ಶಿಕ್ಷಣ ಪಡೆಯುವಾಗ 'ಯಶವಂತ್ರಾಯ' ಎಂಬ ಶಿಕ್ಷಕರು ಶ್ರಮಪಟ್ಟು ಮರಾಠಿಯನ್ನು ಕಲಿಸುತ್ತಿದ್ದರಲ್ಲದೇ ಮನೆಯಲ್ಲೂ ಪಾಠ ಮಾಡುತ್ತಿದ್ದರು. ಶಾಂತಪ್ಪ ಅವರಿಗೆ ಫೀಸು ಇಲ್ಲದೆ ಮರಾಠಿಯನ್ನು ಕಲಿಸಿದರು. ಇವರ ಜಾಣತನ, ಸತ್ಯಸಂದತೆ, ಗುರು ಭಕ್ತಿಗಳನ್ನು ಕಂಡು ಏಳನೆಯ ತರಗತಿಯಲ್ಲಿ ಓದುವಾಗ ಇವರನ್ನು ವೀರಭದ್ರಪ್ಪ ಉನ್ನಿ ಎಂಬ ಸಹಕಾರರಿಗೆ ಪರಿಚಯಿಸಿದರು. ವೀರಭದ್ರಪ್ಪ ಉನ್ನಿಯವರು ಹಣವಂತರಷ್ಟೇ ಅಲ್ಲದೆ ಗುಣವಂತರು, ದೈವಭಕ್ತರು ಹಾಗೂ ತತ್ವನಿಷ್ಠರು, ಛಲವಾದಿಗಳು ಆಗಿದ್ದರು. ಅವರು ಶಾಂತಪ್ಪನವರನ್ನು ತಮ್ಮ ಮಕ್ಕಳೊಂದಿಗೆ ಮನೆಯಲ್ಲಿರಲು ಹೇಳಿದರು. ಅಭ್ಯಾಸ ಮಾಡುವಾಗ ಅವರ ಮಕ್ಕಳನ್ನು ಜೊತೆಗೆ ಕುಳಿತಿಸಿಕೊಂಡು ಅಭ್ಯಾಸ ಮಾಡಬೇಕು. ದೇವರ ಪೂಜೆ ಮಾಡಿ ಊಟ ಮಾಡಬೇಕು. ತನಗೆಂದೇ ಕೊಟ್ಟ ಗಾದಿ, ಬೆಡ್ ಸೀಟ್‌ಗಳನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕೆಂದು ಆಜ್ಞಾಪಿಸಿದರು. ಅದರಂತೆ ನಡೆದುಕೊಳ್ಳುತ್ತಿದ್ದ ಬಾಲಕ ಶಾಂತಪ್ಪ ಅದೊಂದು ದಿನ ಯಜಮಾನರು ಊರಿಗೆ ಹೋಗಿದ್ದರು. ಯಜಮಾನಿ ನೋಡಪ್ಪ ಮಗ ಇವತ್ತ ನಾನೇ ಪೂಜೆ ಮಾಡ್ತೀನಿ ನೀನು ಲಿಂಗಪೂಜೆಮಾಡಿಕೊಂಡು ಊಟ ಮಾಡು ಎಂದರು. ಶಾಂತಪ್ಪ ಇನ್ನೇನು ಊಟ ಮಾಡಬೇಕು ಎಂದು ಕುಳಿತುಕೊಳ್ಳವಷ್ಟರಲ್ಲಿ ಯಜಮಾನರು ಬಂದರು. ಯಾಕೋ ಶಾಂತಪ್ಪ ದೇವರ ಪೂಜೆ ಆಯ್ತಾ? ಊಟ ನಡದಾದ ಎಂದರು. ಅದಕ್ಕೆ ಶಾಂತಪ್ಪ ಇಲ್ರಿಯಪ್ಪಾ ಇವತ್ತ ಅವ್ವೋರು ನಾನೇ ಮಾಡ್ತೀನಿ ನೀನು ಉಣ್ಣು ಅಂದರು. ಅದಕ ಊಟ ಮಾಡಲಾತೀನಿ ಎಂದರು. ಸಾಕು ಬಿಡು ನಾ ಹೇಳಿದ್ದ ಬಿಟ್ಟ ಹೀಂಗಯಾಕ ಮಾಡ್ದಿ? ನಿನಗ ಇವತ್ತ ರಾತ್ರಿ ತನಕ ಊಟಾನೇ ಇಲ್ಲ ಏಳು ಎಂದರು. ಯಜಮಾನರು ರಾತ್ರಿವರೆಗೆ ಊಟ ಮಾಡಲೇ ಇಲ್ಲ. ರಾತ್ರಿ ಮತ್ತೆ ಸ್ನಾನ ಮಾಡಿ ಲಿಂಗಪೂಜೆಯ ನಂತರ ಊಟಕ್ಕೆ ಕುಳಿತು ಬಾರೋ ಶಾಂತಪ್ಪ ಬಾ ಊಟ ಮಾಡ

---

[3] ಪ್ರೊ. ವಿರೇಂದ್ರ ಸಿಂಪಿ – ನಾಕಂಡ ನನ್ನ ದೇಶಾಂಶ ಹುಡಗಿ–ಚೇತನ ಶಿಲ್ಪಿ.

ಬಾ ಎಂದು ಕರೆದು ಹತ್ತಿರ ಕುಳ್ಳಿರಿಸಿಕೊಂಡು ಊಟ ಮಾಡಿದರು. ವೀರಭದ್ರಪ್ಪನವರಿಂದ ಜೀವನದ ಅನೇಕ ಪಾಠಗಳನ್ನು ಕಲಿತಿರುವುದಾಗಿ ದೇಶಾಂಶ ಹೇಳಿಕೊಳ್ಳುತ್ತಾರೆ[4]. ಹೀಗಿಯೇ ಪ್ರೌಢ ಶಿಕ್ಷಣ ಪಡೆಯುವಾಗ ಅವರು ಶಿವರುದ್ರಪ್ಪ ಬೋಳದ ಹಾಗೂ ಚಂದ್ರಪ್ಪ ಯಾಕ್ತಾಪುರ, ಬಸಲಿಂಗಪ್ಪ ಮಂಗಲಗಿಯವರಿಂದ ಸಹಾಯ ಪಡೆದು ಈ ಶಿಕ್ಷಣ ಪೂರೈಸಿದರು. ಒಟ್ಟಾರೆ ಶಿಕ್ಷಣದಲ್ಲಿ ಅವರು ಶ್ರಮಿಸಿದ ದಾರಿ ಏರು ಪೇರಿನಿಂದ ಕೂಡಿತ್ತು.

## ವೃತ್ತಿ ಜೀವನಃ

ದೇಶಾಂಶ ಹುಡುಗಿಯವರು ತಮ್ಮ ವೃತ್ತಿ ಜೀವನ ತೃಪ್ತಿಕರವಾಗಿತ್ತು ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಇವರಿಗೆ ಪಾಠ ಹೇಳುವುದೆಂದರೆ ಬಹಳ ಖುಷಿಕೊಡುತ್ತಿತ್ತು. ಇವರು ವಿದ್ಯಾರ್ಥಿಗಳನ್ನು ತುಂಬಾ ಹತ್ತಿರದಿಂದ ಕಂಡು ಅವರ ಪ್ರೀತಿಗೆ ಪಾತ್ರರಾಗಿದ್ದರು. ದೇಶಾಂಶ ಹುಡುಗಿಯವರು ಬಹಳ ಉತ್ಸಾಹದಿಂದ ಪಾಠ ಮಾಡುತ್ತಿದ್ದರು. ಪ್ರಪ್ರಥಮವಾಗಿ ಇವರು ೧೯೫೪ ರಲ್ಲಿ ಮದರಗಾಂವ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನೌಕರಿಗೆ ಸೇರಿದರು. ೧೯೬೩ ರಲ್ಲಿ ಹುಡಗಿ ಗ್ರಾಮದ ಎನ್.ಟಿ.ಎಂ.ಎಸ್. ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದ್ದಾರೆ.

೧೯೬೫ ರಲ್ಲಿ ಮುಡಬಿ ಗ್ರಾಮದ ಪ್ರೌಢ ಶಾಲೆಗೆ ಬಡ್ತಿಯಾಗಿ ಸೇವೆಗೈದರು. ನಂತರ ೧೯೭೨ ರಲ್ಲಿ ವಯಸ್ಕರ ಶಿಕ್ಷಣ ಯೋಜನಾಧಿಕಾರಿಯಾಗಿ ಭಾಲ್ಕಿಯಲ್ಲಿ ಕಾರ್ಯನಿರ್ವಹಿಸಿದರು. ೧೯೮೨ ರಲ್ಲಿ ಶಾಲಾ ತನಿಖಾಧಿಕಾರಿಯಾಗಿ ಭಾಲ್ಕಿಯಲ್ಲಿಯೇ ಸೇವೆಗೈದು ೩೦-೧೧-೧೯೯೪ ರಂದು ನಿವೃತ್ತಿಹೊಂದಿದರು. ದೇಶಾಂಶ ಹುಡುಗಿಯವರಿಗೆ ಕಲಿಸುವಿಕೆಯಲ್ಲಿ ಪ್ರೀತಿಯಿತ್ತು. ಶಿಕ್ಷಣ ನೀಡುವುದರೊಂದಿಗೆ ಗ್ರಾಮಾಭಿವೃದ್ಧಿ ಕಾರ್ಯದಲ್ಲಿಯೂ ತೊಡಗಿದ್ದವರು. ತಮಗಿರುವ ಪರಿಮಿತ ಅವಕಾಶಗಳಲ್ಲಿ ಉತ್ತಮ ಕಾರ್ಯನಿರ್ವಹಿಸಿದ ಕೀರ್ತಿ ಇವರದಾಗಿದೆ. ಮಕ್ಕಳೆಂದರೆ ಪಂಚಪ್ರಾಣ ಕಲಿಸುವುದೆಂದರೆ ಬಹಳ ಖುಷಿ. ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮ ಎಲ್ಲೇ ಇದ್ದರೂ ಶಾಂತಪ್ಪ ಮಾಸ್ತರರು ತಪ್ಪದೇ ಹಾಜರಿರುತ್ತಿದ್ದರು. ಹೊಸದನ್ನು ತಿಳಿದುಕೊಳ್ಳಬೇಕೆಂಬ ಹಂಬಲ ಅವರದು[5].

---

[4] ದೇಶಾಂಶ ಆತ್ಮಕಥೆಯಿಂದಾಯ್ದ ಘಟನೆಯಿದು – ಪು–೩೧.

[5]. ಪಂಚಾಕ್ಷರಿ ಜಿ. ಹಿರೇಮಠ – ಧರಿನಾಡು ಅಜಾತಶತ್ರು–ಚೇತನ ಶಿಲ್ಪಿ–ಪು–೬೧.

ದೇಶಾಂಶ ಹುಡುಗಿ ಅವರು ನೇರ ನಡೆ, ಸರಳ ಸಜ್ಜನಿಕೆಯ, ಮುಕ್ತ ಮನಸ್ಸಿನ ಮೃದುಜೀವಿ, ಅವರ ಯಾವುದೇ ಸಾಹಿತ್ಯ ಪ್ರಕಾರವೂ ಅವರೂ ಉಸಿರಾಡಿದ ನೆಲದ ಭಾಷೆಗೆ ಬಾಯಿಯಾಯಿತು. ಇಲ್ಲಿಯೇ ಅವರಿಂದ ಗ್ರಾಮ ಶಿಲ್ಪಿಗಳು, ಬದುಕಿನ ಸುತ್ತ, ಅಕ್ಷರ ಜ್ಯೋತಿ, ದಿಗಂಬರ ವಚನಗಳು ಧರಿನಾಡಿನ ಜಾನಪದ ಗಾದೆಗಳು, ಮಹಾತ್ಮ ಬಸವೇಶ್ವರ, ಸಿದ್ದರಾಮೇಶ್ವರ ವಚನಗಳು, ಧರಿನಾಡಿನ ಕಾವ್ಯ, ಗುರುಪುತ್ರ, ಹೀಗೆ ಮಹತ್ವದ ಸಾಹಿತ್ಯ ಕೃತಿಗಳು ರಚನೆಯಾದವು. ವ್ಯಕ್ತಿ ಜೀವನದಲ್ಲಿ ಅವರು ಪಡೆದ ಅನುಭವ ದೊಡ್ಡದು, ಅವರು ಅನೇಕ ಕಾರ್ಯಾಗಾರಗಳಲ್ಲಿ ಭಾಗವಹಿಸಿ ತರಬೇತಿ ಪಡೆದರು.

## ಭಾಗವಹಿಸಿದ ಕಾರ್ಯಗಾರಗಳು:

೧. ರಾಜ್ಯ ಮಟ್ಟದ ಸಾಕ್ಷರತಾ ಕಾರ್ಯಕ್ರಮಗಳು:

- ಮೂಲಕಿಯಲ್ಲಿ ಮಕ್ಕಳ ಕಾರ್ಯಗಾರ – ರಸಿಕ ಪುತ್ತಿಗೆ ಅಧ್ಯಕ್ಷತೆಯಲ್ಲಿ (೧೯೯೨ ರಲ್ಲಿ).
- ಹೆಗ್ಗೋಡಿನಲ್ಲಿ ನವಸಾಕ್ಷರ ಕಾರ್ಯಗಾರ – ಕೆ.ವಿ. ಸುಬ್ಬಣ್ಣ ಶಿವರಾಂ ಕಾರಂತರ ನೇತೃತ್ವದಲ್ಲಿ (೧೯೯೩ ರಲ್ಲಿ)
- ಶಿವಾರ ಗುಡ್ಡೆ, ಮಂಡ್ಯ, ಮೈಸೂರು, ಬೆಂಗಳೂರು, ಬಸವಕಲ್ಯಾಣ, ಬೀದರಗಳಲ್ಲಿ ರಾಜ್ಯ ಮಟ್ಟದ ಸಾಕ್ಷರತಾ ಕಾರ್ಯಗಾರಗಳಲ್ಲಿ ಭಾಗವಹಿಸಿದರು.

೨. ರಾಷ್ಟ್ರಮಟ್ಟ ಸಾಕ್ಷರತಾ ಕಾರ್ಯಗಾರಗಳು:

ಮಧ್ಯ ಪ್ರದೇಶದ ಖಂಡ್ವಾದಲ್ಲಿ – ಆಂಧ್ರ, ಕೇರಳ, ತಮಿಳು ನಾಡು, ಕರ್ನಾಟಕ, ಪಾಂಡಿಚೇರಿಗಳ ಸಂಪನ್ಮೂಲ ವ್ಯಕ್ತಿಗಳಿಗೆ ದುಭಾಷಿಯಾಗಿ (೧೯೯೪) ರಲ್ಲಿ ಆಂಧ್ರದ ಮೇದಕನಲ್ಲಿ ಕನ್ನಡ ಸಾಕ್ಷರತಾ ಪ್ರಚಾರಕನಾಗಿ (೧೯೯೨) ರಲ್ಲಿ ಕಾರ್ಯನಿರ್ವಹಿಸಿದರು.

## ಪತ್ರಿಕಾ ರಂಗದಲ್ಲಿ ಕಾರ್ಯ:

ದೇಶಾಂಶ ಹುಡುಗಿ ಪತ್ರಿಕಾ ರಂಗದಲ್ಲಿಯೂ ಕಾರ್ಯನಿರ್ವಹಿಸಿದರು. ಇವರು ಒಬ್ಬ ಆದರ್ಶ ಶಿಕ್ಷಕರಾಗಿದಂತೆ ಒಳ್ಳೆಯ ಸಂಪಾದಕರಾಗಿದ್ದರು. ಕೈಬರಹದ ಸೇಡಂ ಶಾಲಾ ಪತ್ರಿಕೆ ಸಂಪಾದಕ (೧೯೫೩)ರಾಗಿ ಕೈ ಬರಹದ ಮುಡಬಿ ಶಾಲಾ

ಪತ್ರಿಕೆ ಸಂಪಾದಕ ೧೯೬೮ ರಲ್ಲಿ ಅಕ್ಷರ ಕಾರಂಜಿ, ಸಾಕ್ಷರತಾ ಪತ್ರಿಕೆ ಬೀದರ ಸಂಪಾದಕ ೧೯೪ ರಿಂದರಾಗಿ ಹಾಗೂ ಶಾಂತಿ ಕಾರಣ ದ್ವೈಮಾಸಿಕ ಪತ್ರಿಕೆ ಸಹ ಸಂಪಾದಕರಾಗಿ ೧೯೮೮ ರಿಂದ ೧೯೯೯ ಉತ್ತರ ಕರ್ನಾಟಕ ಸಾಹಿತ್ಯ ಅಂಕಣಕಾರಾಗಿ ೧೯೯೨–೯೩ರ ವರೆಗೆ ಪಬ್ಲಿಕ್ ಪತ್ರಿಕೆ ನಿರಂತರ ಬರಹಗಾರನಾಗಿ (೧೯೯೪ ರವರೆಗೆ) ವಚನ ಕ್ರಾತಿಯ ಸಾಹಿತ್ಯ ಬರಹಗಾರನಾಗಿ ೨೦೦೩ ರಿಂದ ೨೦೦೪ ರ ವರೆಗೆ, ಸಂಸ್ಕೃತಿಕ ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯನಾಗಿ ೨೦೦೩ ರಿಂದ ಹಾಗೂ ಧರ್ಮೋಪದೇಶ ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯನಾಗಿ ಸಹ ಸಂಪಾದಕನಾಗಿ ಮತ್ತು ವಿಶ್ವ ಕಲ್ಯಾಣವಾರ ಪತ್ರಿಕೆಯ ಬರಹಾರನಾಗಿ ೧೯೬೮ ರಿಂದ ಹೀಗೆ ಅವರು ಪತ್ರಿಕಾ ರಂಗದಲ್ಲಿ ತಮಗಿರುವ ಪರಿಮಿತ ಅವಕಾಶಗಳಲ್ಲಿ ಉತ್ತಮ ಕಾರ್ಯನಿರ್ವಹಿಸಿದರು.

ದೇಶಾಂಶ ಹುಡುಗಿ ಅವರು ಸಾಹಿತ್ಯದೇ ಮಾತ್ರ ತೊಡಗಿರದೇ ಸಾಹಿತ್ಯೇತರ ಚಟುವಟಿಕೆಗಳಲ್ಲಿಯು ಅತಿ ಮುತುವರ್ಜಿಯಿಂದ ಭಾಗವಹಿಸುತ್ತಿದ್ದರು. ಆಕಾಶವಾಣಿ, ದೂರದರ್ಶನಗಳಲ್ಲಿ ತಮ್ಮ ಚಿಂತನಗಳನ್ನು, ಕವನಗಳನ್ನು ಮಂಡಿಸಿದ್ದಾರೆ. ಅನೇಕ ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ವಿಚಾರಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ದೇಶಾಂಶ ಹುಡುಗಿಯವರು ಉದಯೋನ್ಮುಖ ಬರಹಗಾರರಿಗೆ ಪ್ರೋತ್ಸಾಹಿಸಿದರು. ಇದಕ್ಕೆ ಹಂಶಕವಿ ಸಾಕ್ಷಿಯಾಗಿದ್ದಾರೆ. ಹಲವಾರು ಯುವ ಪ್ರತಿಭೆಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ಪರಿಚಯಿಸಿದ ಕೀರ್ತಿಯೂ ಇವರದ್ದಾಗಿದೆ.

## ಸಾಂಘಿಕ ಜೀವನಃ

ಯಾವತ್ತೂ ನಗೆಯ ಸಿರಿಯನ್ನೇ ಮುಖದಲ್ಲಿ ತುಂಬಿಕೊಂಡು ನಿಲ್ಲುವ ಸರಳ ಬದುಕಿನ ಸ್ನೇಹ ಜೀವಿಯಾದ ದೇಶಾಂಶ ಹುಡುಗಿಯವರು ಸಾಂಘಿಕ ಜೀವನದಲ್ಲಿಯೂ ಹಿಂದೆ ಬಿದ್ದವರಲ್ಲ. ವೃತ್ತಿಯ ಜೊತೆಗೆ ವಿವಿಧ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಬಂಧವನ್ನು ಪಡೆದಿದ್ದಾರೆ. ಇವರು ಅಖಿಲ ಭಾರತ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನ ಆಜೀವ ಸದಸ್ಯತ್ವ ಹೊಂದಿರುವುದಲ್ಲದೆ, ಶರಣ ಸಾಹಿತ್ಯ ಪರಿಷತ್ತಿನ ಸದಸ್ಯರು, ಧರಿನಾಡು ಕನ್ನಡದ ಸಂಘದ ಅಧ್ಯಕ್ಷರೂ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಜಿಲ್ಲೆಯಲ್ಲಿಯ ಕನ್ನಡ ಸಂಘಟನೆಗಳ ನಿರ್ದೇಶಕರಾಗಿ, ಸಲಹೆಗಾರರಾಗಿಯೂ ಕಾರ್ಯನಿರ್ವಹಿಸಿರುವರು. ಈ ಮೂಲಕ ಎಷ್ಟೋ ಜನ ಯುವ ಕವಿಗಳನ್ನು

ಹಾಗೂ ಕವಿಯಿತ್ರಿಯರನ್ನು ಇಲ್ಲಿ ಬೆಳೆಸಿದ್ದಾರೆ. ಬೋಧನೆಯನ್ನು ಮಾಡುವ ಸಂದರ್ಭದಲ್ಲಿಯೂ ಶಿಸ್ತು ಸಂಯಮವನ್ನು ಕಾಪಾಡಿಕೊಂಡು ಹೋಗುತ್ತಿದ್ದರು. ಬೋಧನೆಯ ಮುಂಚೆ ವಿದ್ಯಾರ್ಥಿಗಳಲ್ಲಿ ಶ್ರದ್ಧೆ ಉತ್ಸಾಹವನ್ನು ಮೂಡಿಸಿ ನಂತರ ವಿಷಯವನ್ನು ತಿಳಿಯುವಂತೆ ಬೋಧಿಸುತ್ತಿದ್ದರು. ಸೇವೆಯಿಂದ ನಿವೃತ್ತಿಯಾಗಿದ್ದರೂ ಅವರ ಸಹೃದಯತೆಯ ಸಾಹಿತ್ಯ ಸಾಧನೆಗೆ ನಿವೃತ್ತಿಯೆಂಬುದು ಇಲ್ಲದಲ್ಲ ಎಂಬುದೇ ಈಗ ಸಮಾಧಾನದ ಸಂಗತಿ ಎನ್ನಬಹುದು.

ದೇಶಾಂಶ ಹುಡುಗಿಯವರ ಕಾರ್ಯ ವೈಖರಿ ಬಹುವಿಶಿಷ್ಟವಾದುದು. ಅವರ ಬೋಧನೆಯಾಗಲೀ, ವಾಕ್‌ಚಾತುರ್ಯ ಯಾಂತ್ರಿಕವಾದುದಲ್ಲ. ಅದು ಯಾವತ್ತೂ ಸಶಕ್ತವಾಗಿರುತ್ತಿತ್ತು. ಅವರು ಯುವ ಬರಹಗಾರರಿಗೆ ಹುರಿದುಂಬಿಸುವ ಗತ್ತು ಗಮ್ಮತ್ತುಗಳನ್ನು ಅವರ ಮಾತಿನಿಂದಲೇ ಅರಿಯಬೇಕಾಗುತ್ತದೆ.

ಇವರ ಬರಹದ ಮೊಡಿ ಎಲ್ಲರನ್ನು ಆಕರ್ಷಿಸುತ್ತಿದೆ. ಅದರಲ್ಲಿ ಬರುವ ಪ್ರತಿಯೊಂದು ಪದಗಳನ್ನು ಸುಲಲಿತವಾಗಿ ಅತೀ ಸರಳವಾಗಿ ಹೇಳುವ ಕಲೆ ಯುವಕರಿಗೆ ಮಾರ್ಗದರ್ಶಕವಾಗಿದೆ. “ವಿದ್ಯಯೆಂದರೆ ಮೆದುಳಿನಲ್ಲಿ ಕೇವಲ ಮಾಹಿತಿ ತುರುಕುವುದಲ್ಲ” ಅದು ಜೀರ್ಣವಾಗದೆ ಆಯುಷ್ಯಾವಿಡೀ ಗೊಂದಲವೆಬ್ಬಿಸುವ ಒಣ ಜ್ಞಾನವೂ ಅಲ್ಲ. ವಿದ್ಯಯಿಂದಾಗಿ ಉಚ್ಚ ವಿಚಾರಗಳು ರಕ್ತಗತವಾಗಿ ಉಳಿಯಬೇಕು. ಅದು ಜೀವನದಲ್ಲಿ ಚೈತನ್ಯಕ್ಕೆಡೆ ಮಾಡುವಂತಾಗಬೇಕು ಎಂಬ ವಿವೇಕಾನಂದರ ಹೇಳಿಕೆಯನ್ನು ಅಕ್ಷರಶಃ ಪಾಲಿಸಿದ ಒಬ್ಬ ಆದರ್ಶ ಶಿಕ್ಷಕರೆಂಬುದು ಅವರ ಶಿಷ್ಯರ ಹೇಳಿಕೆಯಾಗಿದೆ.

ಅವರು ನಾಡು ನುಡಿ ಬೆಳೆಸುವ ತುಡಿತ ಉಳ್ಳವರು. ಕಲೆ ಸಾಹಿತ್ಯ ಸಂಗೀತವನ್ನು ಜೀವಂತ ಉಳಿಸುವ ಕ್ರಿಯಾಶೀಲರು – ಕುಳಿತಲ್ಲಿ ನಿಂತಲ್ಲಿ ಹೋದಲೆಲ್ಲ ಕನ್ನಡ ನಗಾರಿ ಬಾರಿಸುತ್ತಿರುವವರು. ಹೀಗಾಗಿ ಹಾಲಿಗಾಗಿ ಹಸಿದು ಬರುವ ಕರುಗಳಂತೆ ಸಾಹಿತ್ಯಾಸಕ್ತರು ಹುಡಿಗಿ ಅವರು ಎಲ್ಲೆಂದು ಬರುವರು. ಬಂದ ಸಾಹಿತ್ಯದ ವಿದ್ಯಾರ್ಥಿಗಳಿಗೆ ಧರದ ತೀಡಿ ಮುದ್ದುಳ್ಳ ಮೂರ್ತಿ ಮಾಡಿದ ಮಾತೃ ಹೃದಯ ಇಂಥ ಅಪರೂಪದ ಮನುಷ್ಯ ಬೆನ್ನ ಹಿಂದಿನ ಬೆಳಕಾಗಿ ನಿಂತಿದ್ದಾರೆ ಎಂಬುದು ಒಪ್ಪತಕ್ಕ ಮಾತು[6].

## ಸಾಹಿತ್ಯಿಕ ಹಿನ್ನಲೆ – ಪರಿಸರ ಹಾಗೂ ಸಾಹಿತ್ಯಾಸಕ್ತಿಃ

ಇವರ ಸಾಹಿತ್ಯಕ್ಕೆ ತಮ್ಮ ತಂದೆಯವರಾದ ಶ್ರೀ ಶರಣಪ್ಪ ದೇವರಾಯ ಇವರಿಂದಲೇ ಪ್ರೇರಣೆ ಸಿಕ್ಕಿತ್ತು ಎನ್ನುತ್ತಾರೆ ಸ್ವತಃ ಹುಡುಗಿಯವರು ಬಾಲ್ಯ

[6] ಗಣಪತಿ ಚನ್ನ ಮಲ್ಲಪ್ಪಾ – ‘ಬೆನ್ನ ಹಿಂದಿನ ಬೆಳಕು ಚೇತನ ಶಿಲ್ಪಿ’ ಪು–೩೫.

ಜೀವನದಲ್ಲಿ ರಾಮರಾಯ ಪೋಲಿಸ್ ಪಾಟೀಲ ಅವರ ಸ್ಫೂರ್ತಿಯೊಂದಿಗೆ ಸಾಹಿತ್ಯ ಲೋಕದಲ್ಲಿ ಪಾದಾರ್ಪಣೆಗೆ ಕಾರಣವಾಯಿತು. ಅಲ್ಲದೇ ದೇಶಾಂಶ ಹುಡುಗಿ ಅವರ ತಾಯಿ ಭೀಮಬಾಯಿ ಉತ್ತಮ ಹಾಡುಗಾರ್ತಿ ಅವರ ತಂದೆ ಕೂಡಾ ಉತ್ತಮ ಹಾಡುಗಾರ ಇವರಿಬ್ಬರ ಪ್ರಭಾವ ಹುಡುಗಿ ಅವರ ಮೇಲಾಗಿರುವುದು. ಆಗಿನ ಕಾಲದಲ್ಲಿ ಮರಾಠಿ ಪ್ರಭಾವ, ಒತ್ತಡ ಬಹಳವಿತ್ತು. ಹಾಗೆ ಸಿದ್ದ ಪ್ರಭುವಿನ ಭಜನೆ ಪದಗಳನ್ನು ಕೇಳುತ್ತಿದ್ದರು. ಇದು ಅವರ ಮನಸ್ಸಿನ ಮೇಲೆ ಪರಿಣಾಮ ಬೀರಿತ್ತು ಹಾಗೂ ಇವರ ತಂದೆಯವರು ವಚನಗಳನ್ನು ಓದುತ್ತಿದ್ದರು. ಅವುಗಳನ್ನು ವಿಶ್ಲೇಷಣೆ ಮಾಡುವ ಮೂಕಲ ಹುಡುಗಿಯವರ ಮೇಲೆ ಅಚ್ಚಳಿಯದಂತೆ ಭಾಪು ಮೂಡಡಿಸುತ್ತಿದ್ದರು. ಈ ಎಲ್ಲದರ ಪ್ರಭಾವದಿಂದ ದೇಶಾಂಶ ಹುಡುಗಿಯವರಿಗೆ ಕಾವ್ಯದೇವಿ ಒಲಿದದ್ದು ಪ್ರೌಢ ಶಾಲಾ ಹಂತದಲ್ಲಿ ಶ್ರೀ ಬಿ. ಮಹಾದೇವಪ್ಪಾ ಅವರು ಸಂಪಾದಕರಾಗಿದ್ದ ವಿಶ್ವಕಲ್ಯಾಣ ಪತ್ರಿಕೆಯಲ್ಲಿ ಅವರ ಮೊದಲ ಕವಿತೆ 'ಮಾತು' ೧೯೬೮ ರಲ್ಲಿ ಪ್ರಕಟವಾಗುವ ಮೂಲಕ 'ಮಹಾತ್ಮ ಬಸವೇಶ್ವರ' ಎಂಬ ಪ್ರಬಂಧವನ್ನು ಡಾ. ಭಗವಾನದಾಸ ತಿವಾರಿಯವರ ಮೂಲ ಹಿಂದಿ ಕೃತಿಯನ್ನು ಕನ್ನಡಕ್ಕೆ ಅನುವಾದಿಸುವ ಮೂಲಕ ತಮ್ಮಲ್ಲಿರುವ ಮತ್ತೊಂದು ಭಾಷಾ ಪಾಂಡಿತ್ಯವನ್ನು ತೋರಿಸಿ ಆ ಮೂಲಕ ತಮ್ಮ ಶರಣ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದರು. ಇವರಿಗೆ ಹೈಸ್ಕೂಲಿನಲ್ಲಿ ಬಹಳಷ್ಟು ಪರಿಣಾಮ ಬೀರಿದವರು ಡಿ.ಎಲ್. ಕುಲಕರ್ಣಿ ಶ್ರೀ ಸೈಯದ ಗೌಸ್ ಇವರು ಕನ್ನಡ, ಇಂಗ್ಲೀಷ ಭಾಷೆಯ ಪ್ರಚಂಡ ಪಂಡಿತರಾಗಿದ್ದರು. ಇವರೆಲ್ಲರ ಸ್ಫೂರ್ತಿಯೇ ಸಾಹಿತ್ಯ ಸೃಷ್ಟಿಗೆ ಒಂದಲ್ಲಾ ಒಂದು ರೀತಿಯಲ್ಲಿ ಆಕರವಾಯಿತೆಂಬುದು ಸುವಿಧಿತ.

ದೇಶಾಂಶ ಹುಡಗಿಯವರು ಸಹೃದಯಿ ಕವಿಗಳು ಸ್ವತಃ ಮಧುರ ಕಂಠವ ಗಾಯಕರು ಸೃಜನಶೀಲ ಸಾಹಿತಿಗಳು ಹಾಗೂ ನಾಟಕಗಳಲ್ಲಿ ಉತ್ಕೃಷ್ಟ ಅಭಿನಯ ನೀಡುವ ಅಪರೂಪದ ಕಲಾವಿದರು ಅಷ್ಟೇ ಅಲ್ಲ; ಅತ್ಯುತ್ತಮ ವಾಙ್ಮಗಳು ಓದಿನ ಗೀಳನ್ನು ಬಾಲ್ಯದಿಂದಲೇ ಅಂಟಿಸಿಕೊಂಡಿರುವ ಇವರು ಚಿಕಿತ್ಸಪೂರ್ಣ ಬುದ್ಧಿಯ ಸಂಶೋಧಕರು ಹೌದು. ವಿವಿಧ ಭಾವಗಳನ್ನು ಬಲ್ಲ ದೇಶಾಂಶರು ಅತ್ಯುತ್ತಮ ಅನುವಾದಕರಾಗಿರುವುದು ಹೆಮ್ಮೆ ಪಡಬೇಕಾದ ಸಂಗತಿಯಾಗಿವೆ. ದಿನ ಪತ್ರಿಕೆಗಳಿಗೆ ಮಾಸ ಪತ್ರಿಕೆಗೆ ಅಂಕಣಕಾರರಾಗಿ ಸಂಪಾದಕರಾಗಿ ಸಾಹಿತ್ಯದ ಪ್ರಕಾರವನ್ನು ಅಳವಡಿಸಿಕೊಂಡು ಸಮಾಜದ ಚಿತ್ರಣ ಜೀವನದ ಬಹುಮುಖಿಗಳ ಪರಿಚಯ ಮಾಡಿಕೊಡುತ್ತಿದ್ದರು. ಇದರಿಂದ ದೇಶಾಂಶ ಹುಡುಗಿಯವರ ಸಾಹಿತ್ಯ ಕ್ಷೇತ್ರ ಬೆಳೆಯಲು ಸಹಾಯಕವಾಯಿತು.

ಸುಸಂಸ್ಕೃತ ಮನೆಯಲ್ಲಿ ಜನಿಸಿದ ದೇಶಾಂಶರಿಗೆ ಬಾಲ್ಯದಿಂದಲೇ ಕನ್ನಡದ ಕಂಪು ಬೀರುವ ಪರಿಸರ ಮನೆಯಲ್ಲಿ ದೊರೆಯಿತು. ತಂದೆ–ತಾಯಿಗಳಿಂದ

ಭಕ್ತಿಗೀತೆ, ಜನಪದ ಗೀತೆಗಳನ್ನು ಆಲಿಸುತ್ತ ಬಂದವರಿಗೆ ಮುಂದೆ ಪ್ರಾಥಮಿಕ ಶಾಲೆಯಲ್ಲಿಯ ಮಾಸ್ತರರಿಂದ ಪ್ರೋತ್ಸಾಹ ದೊರೆಯಿತು. ದೇಶಾಂಶರು ತಮ್ಮ ಸಣ್ಣ ವಯಸ್ಸಿನಲ್ಲಿಯೇ ವಿವಿಧ ಪ್ರಕಾರದ ಪುಸ್ತಕಗಳನ್ನು ತಂದು ಓದುತ್ತ ರಾತ್ರಿ ಕಳೆಯುತ್ತಿದ್ದರು. ಓದಿನಲ್ಲಿ ತನ್ಮಯರಾಗುವಷ್ಟು ಪುಸ್ತಕ ಪ್ರೇಮಿಗಳಿವರಾಗಿದ್ದರಿಂದ ಅವರಲ್ಲಿ ಸಾಹಿತ್ಯಿಕ ಆಸಕ್ತಿ ಮೂಡಿತು. ಅವರು ವೃತ್ತಿ ಜೀವನದಲ್ಲಿ ಕಾಲಿರಿಸಿದಾಗ ಹಲವಾರು ರಾಜ್ಯ ಮಟ್ಟದ ಕಾರ್ಯಾಗಾರಗಳಲ್ಲಿ ಭಾಗವಹಿಸಿದರು. ಅತ್ಯಂತ ಶ್ರೇಷ್ಠ ಕವಿಗಳ ಸಾಹಿತಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಆ ಕಾರ್ಯಾಗಾರಗಳಿಂದ ಇವರು ಪ್ರಭಾವಿತರಾದರು. ೧೯೯೬ ರಲ್ಲಿ ಮೂಲಕಿಯಲ್ಲಿ ಜರುಗಿದ ಮಕ್ಕಳ ಕಾರ್ಯಾಗಾರ ರಸಿಕ ಪುತ್ತಿಗೆಯವರ ಅಧ್ಯಕ್ಷತೆಯಲ್ಲಿ ಹಾಗೂ ಹೆಗ್ಗೋಡಿನ ನವಸಾಕ್ಷರ ಕಾರ್ಯಾಗಾರವು ಕೆ.ವಿ. ಸುಬ್ಬಣ್ಣ ಹಾಗೂ ಶಿವರಾಮ ಕಾರಂತರ ನೇತೃತ್ವದಲ್ಲಿ (೧೯೯೩ ರಲ್ಲಿ) ಜರುಗಿದ್ದು, ಅವರನ್ನು ಉತ್ತಮ ಸಾಹಿತಿಯಾಗಿಸಲು ದಾರಿದೀಪವಾಯಿತೆನ್ನುತ್ತಾರೆ ಅವರು.

ಓದಿನೊಂದಿಗೆ ಕವನ ರಚನೆ, ಉರ್ದು, ಮರಾಠಿ ಭಾಷೆಗಳಲ್ಲಿ ಉತ್ತಮವಾದದನ್ನು ಓದಿ ಅನುವಾದಿಸುವುದು ಹೈಸ್ಕೂಲಿನಿಂದಲೇ ಆರಂಭಿಸಿದರು. ಇವರ ಹಾಡುಗಾರಿಕೆಯು ಕಾವ್ಯ ಕೃಷಿಗೆ ಪ್ರೇರಣೆಯೊದಗಿಸಿತು. ಅವರ ಸುತ್ತೆಲ್ಲ ಉರ್ದು, ಫಾರಸಿ, ಹಿಂದಿ, ಮರಾಠಿ ಭಾಷಾ ಪಂಡಿತರಿದ್ದರು. ಅವರ ಮಧ್ಯದಲ್ಲಿ ಕನ್ನಡ ಸಾಹಿತ್ಯ ನರಳುತ್ತಿರುವ ಸಂದರ್ಭ ಒಂದು ಕಡೆ; ಇನ್ನೊಂದೆಡೆ ಮಾಧ್ಯಮದ ಕೊರತೆ, ನಿರಕ್ಷರಿಗಳ ಗುಂಪು ಈ ಸಂದರ್ಭದಲ್ಲಿ ಆಗಾಗ ಕವನಗಳನ್ನು ಬರೆಯಲು ಆರಂಭಿಸಿದರೂ ಸಹ ಅವರ ಮೊದಲ ಸಂಕಲನ 'ಗ್ರಾಮ ಶಿಲ್ಪಿಗಳು' ಪ್ರಕಟವಾದದ್ದು ೧೯೮೦ ರಲ್ಲಿ ಆ ಮೇಲೆ ಬದುಕಿನ ಸುತ್ತು ೧೯೮೮ ರಲ್ಲಿ ಕವನ ಸಂಕಲನ ಬಂತು. ಅವರ ಸಾಕ್ಷರತಾ ಗೀತೆಯಾಗಿದ್ದು, 'ಅಕ್ಷರಜ್ಯೋತಿ' ೧೯೯೩ ರಲ್ಲಿ ಪ್ರಕಟವಾದನಂತರ ಅವರಿಂದ ಸಾಹಿತ್ಯ ಕೃಷಿ ಹುಲುಸಾಗಿ ನಡೆಯಿತೆನ್ನಬಹುದು.

## ಕೌಟುಂಬಿಕ ಜೀವನ:

ಬದುಕಿನ ಏನೆಲ್ಲ ಎಳು ಬೀಳುಗಳನ್ನು ಸಹಿಸಿಕೊಂಡು ಅವನ್ನೆಲ್ಲ ತಮ್ಮಲ್ಲಿಯೇ ಹುದುಗಿಸಿಕೊಂಡು ವಿಚಲಿತರಾಗದೆ, ಒಂದು ರೀತಿಯ ಸಮಚಿತ್ತತೆಯನ್ನು ಸಾಧಿಸಿಕೊಂಡವವರು ದೇಶಾಂಶ ಹುಡುಗಿಯವರು. ೧೯೫೬ ರಲ್ಲಿ ಮಹಾದೇವಿಯೊಂದಿಗೆ ಗೆಳೆಯರ ಮಧ್ಯದಲ್ಲಿ ವಿವಾಹ

ಬಂಧನಕ್ಕೊಳಗಾದವರು. ಇವರದು ತುಂಬ ಕುಟುಂಬ ಒಟ್ಟು ಇವರಿಗೆ ಏಳು ಜನ ಮಕ್ಕಳು. ಅವರಲ್ಲಿ ಮೊದಲನೆ ಮಗ ರಾಜಶೇಖರ ಎ.ಎಂ.ಎಲ್.ಆಯ್.ಎಸ್.ಸಿ. ಇವರು ಮುಂಬೈನಲ್ಲಿ ಹೆಡ್ ಲೈಬ್ರರಿಯನ್ ಆಗಿದ್ದಾರೆ. ಇವರ ಹೆಂಡತಿ ಶಾರದಾ ರಾಜಶೇಖರ. ಎರಡನೇ ಮಗ ರವಿ ಶಂಕರ, ಡಿಪ್ಲೊಮಾ ಇನ್ ಲೈಬ್ರರಿ ಸೈನ್ಸ್ ರೂರಲ್ ಇಂಜಿನೀಯರಿಂಗ್ ಕಾಲೇಜು ಭಾಲ್ಕಿಯಲ್ಲಿ ಲೈಬ್ರರಿಯನ್ ಇವರ ಹೆಂಡತಿ ಸವಿತಾ ರವಿಶಂಕರ. ಮೂರನೇ ಮಗ ಜಯಶಂಕರ ಬಿ.ಎಸ್.ಸಿ. ಬಿ.ಇಡ್. ಎಂ.ಎಸ್.ಸಿ. ಕರ್ನಾಟಕ ಪಬ್ಲಿಕ್ ಸ್ಕೂಲ್ ಬೀದರ ಮುಖ್ಯೋಪಾಧ್ಯಾಯ ಇವರ ಹೆಂಡತಿ ಹೆಸರು ಶಾಂತಲಾ ಜಯಶಂಕರ ನಾಲ್ಕನೇ ಮಗ ಬಸವರಾಜ ಹೆಗೆಯೋ ಈಗಾಗಲೇ ೧೩ ಜನ ಮೊಮ್ಮಕ್ಕಳನ್ನು ಕಂಡಿರುವ ಇವರು ತುಂಬು ಸಂಸಾರದ ತಾತನವರು.

ಮನೆಯ ಎಲ್ಲಾ ಜವಾಬ್ದಾರಿಯನ್ನು ತಾವೇ ನಿಭಾಯಿಸಿಕೊಂಡು ಸದಾ ಹಸನ್ಮುಖಿಯಾಗಿ ಸಾಗುತ್ತಿರುವ ಮಹಾದೇವಿಯವರು ಸಹನಾಮಯಿ ಸಹಬಾಳ್ವೆಯ ಜೀವನ ನಡೆಸುತ್ತಿರುವ ಹೆಂಡತಿಯನ್ನು ದೇಶಾಂಶರು ದೇವತಾ ಸ್ವರೂಪ ಎಂದು ಹೇಳುತ್ತಾರೆ.

ಬದುಕಿನುದ್ದಕ್ಕೂ ಪ್ರಾಮಾಣೀಕತೆಯನ್ನು ಅಳವಡಿಸಿಕೊಂಡು ಬಂದ ಇವರ ಬದುಕು ಆದರ್ಶ ಪ್ರಾಯವಾಗಿದೆ. ಎಲ್ಲಾ ಮಕ್ಕಳು ಸ್ವಾವಲಂಬಿಯಾಗಿ ಜೀವನವನ್ನು ಸುಖ ಸಂತೋಷದಿಂದ ಕಳೆಯುತ್ತಿದ್ದಾರೆ. ಜೀವನವೆಂದ ಮೇಲೆ ಅದಕ್ಕೆ ಸಮಸ್ಯೆಗಳು ಸಹಜ, ಅದಕ್ಕೆ ತಕ್ಕ ಪರಿಹಾರೋಪಾಯ ಹುಡುಕಿ ಸರಿಪಡಿಸಿಕೊಂಡು ಹೋಗುವ ಐಕ್ಯತೆ ಅವರಲ್ಲಿದೆ. ಒಟ್ಟಿನಲ್ಲಿ ಅವರ ಬರಹಕ್ಕಿಂತ 'ಬದುಕು' ದೊಡ್ಡದಾಗಿತ್ತು ಎನ್ನಬಹುದು.

## ಹವ್ಯಾಸಃ

ದೇಶಾಂಶ ಹುಡುಗಿ ತಮ್ಮ ವೃತ್ತಿ ಜೀವನ ತೃಪ್ತಿಕರವಾಗಿತ್ತು ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಓದು ಬರಹ ಇವರ ಮುಖ್ಯವಾದ ಹವ್ಯಾಸವಾಗಿದೆ. ಮಹಿಳೆಯರ ಬಗ್ಗೆ ಕಳಕಳಿ, ಸ್ತ್ರೀಯರ ಸನ್ಮಾನ, ಸ್ತ್ರೀಪರ ಧೋರಣೆ ವ್ಯಕ್ತಪಡಿಸುವುದು ಬೀದರದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು, ಹಾಡುಗಾರಿಕೆ (ಗೀಗಿ ಪದಗಳು) ವ್ಯಾಯಾಮ, ಈಜುಗಾರಿಕೆ, ಕುಸ್ತಿಯಾಡುವುದು, ಕೊಳಲು ಊದುವುದು, ನಾಟಕ ನಿರ್ದೇಶನ ಹೀಗೆ ಹಲವು ಚಟುವಟಿಕೆಗಳನ್ನು

ಇವರು ತುಂಬಾ ಆಸಕ್ತಿಯಿಂದ ಮಾಡುತ್ತಿರುತ್ತಾರೆ. ಕನ್ನಡ ಪರ ಕಾರ್ಯಕ್ರಮಗಳೆಂದರೆ ಅವರಿಗೆ ತುಂಬಾ ಇಷ್ಟವಾಗಿದ್ದವು.

## ಕಾಯಕ ಜೀವಿ:

ದೇಶಾಂಶರು ಕಾಯಕವೇ ಕೈಲಾಸವೆಂಬ ವಚನಕಾರರು ಸೂಕ್ತಿಯನ್ನು ಅನುಸರಿಸಿ ನಡೆದ ಕಾಯಕ ಜೀವಿಗಳು, ಸದಾ ಪಾದರಸದಂತೆ ಕಾರ್ಯ ತತ್ಪರರಾಗುವ ಕರ್ತವ್ಯ ನಿಷ್ಠರು. ಸದಾ ಕನ್ನಡ ನಾಡು ನುಡಿ ಹಾಗೂ ಸಾಹಿತ್ಯದ ಸಂದರ್ಭಗಳಲ್ಲಿ ಬೇಸರಿಸದೆ ಕೆಲಸ ಮಾಡುವಂಥ ಚೇತನ ಜೀವಿಗಳು. ಗುರು- ಲಿಂಗ- ಜಂಗಮ ಪ್ರೇಮಿಗಳಾದ ಶರಣ ತತ್ವಕ್ಕೆ ಬದ್ಧರಾಗಿ ನಡೆದುಕೊಳ್ಳುವುದರೊಂದಿಗೆ ವಚನ ಸಾಹಿತ್ಯವನ್ನು ಆಳವಾಗಿ ಅಭ್ಯಾಸಿಸಿ ಅಲ್ಲಿಯ ಮಹಿಮರ ಬದುಕನ್ನು ಕುರಿತು ಅವುಗಳನ್ನು ಅನ್ಯರಿಗೆ ತಿಳಿಸಲು ಲೇಖನಿ ಹಿಡಿದಿದ್ದಾರೆ. ಪ್ರೇಮಿಗಳಾಗಿದ್ದ ಶ್ರೀ ಶಾಂತಪ್ಪ ದೇವರಾಯ ಅವರು ಅನೇಕ ಶರಣರ ಅನುಪಮ ಚರಿತೆಗಳನ್ನು ಓದಿದ್ದಾರೆ. ಜೀವನದಲ್ಲಿಯೂ ಅವುಗಳನ್ನು ಅನುಸರಿಸಿಕೊಂಡು ಬಾಳಲು ಪ್ರಯತ್ನಿಸುತ್ತಿದ್ದಾರೆ.

ಇವರ ಸೃಜನಶೀಲತೆ ಹಲವು ದಿಕ್ಕುಗಳಲ್ಲಿ ಹರಿದಿದೆ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ತಮ್ಮ ಪ್ರತಿಭೆಯನ್ನು ತೋರಿರುವ ದೇಶಾಂಶರು, ಅದಕ್ಕಾಗಿ ವೈವಿದ್ಯಮಯ ಮಾಧ್ಯಮಗಳನ್ನು ಬಳಸಿಕೊಂಡಿದ್ದಾರೆ. ಈ ದೃಷ್ಟಿಯಲ್ಲಿ ಯುವ ಸಾಹಿತಿಗಳಿಗೆ ಬೆನ್ನು ಹಿಂದಿನ ಬೆಳಕಾಗಿ ನಿಂತಿದ್ದಾರೆ. ಜಾನಪದ ಹಾಡುಗಳನ್ನು ಹಾಡುತ್ತಾ ಮಣ್ಣಿನ ಮಗನಾಗಿ ಬೆಳೆದು ಕನ್ನಡ ನಾಡು ನುಡಿಯ ಸೇವೆ ಮಾಡಿದ್ದಾರೆ ಹಾಗೂ ಕನ್ನಡ ಸಂಸ್ಕೃತಿಯ ತುಸಡಿತವುಳ್ಳ ಅವರು ಕಲೆ ಸಾಹಿತ್ಯ ಸಂಗೀತವನ್ನು ಜೀವಂತ ಉಳಿಸುವ ಕ್ರೀಯಾಶೀಲ ಎನಿಸಿದ್ದಾರೆ. ಈ ಲಂ ರ ಇಳಿ ವಯಸ್ಸಿನಲ್ಲಿಯೂ ಅತಿಯಾದ ಲವಲವಿಕೆಯಿಂದ ಓಡಾಡುತ್ತ ಕನ್ನಡ ಸಂಘದ ಮೂಲಕ ಗಡಿಭಾಗದ ಕನ್ನಡದ ಉಳಿವಿಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ.

## ಜನಪರ ಕಾಳಜಿ:

ದೇಶಾಂಶ ಹುಡುಗಿಯವರು ಜನಪದ ಬದುಕನ್ನು ಕಂಡುಂಡವರು ಅಂತೆಯೇ ಜನಪದರ ನೋವು- ನಲಿವು, ಅಲ್ಲಿಯ ಗೆಲವು ಒಲವುಗಳು ಅವರ ಸಾಹಿತ್ಯದಲ್ಲಿ ಹೊರಹೊಮ್ಮಿ ನಿಂತವು. ಸಾಹಿತಿಯ ಬದುಕು ತೆರೆದಿಟ್ಟ ಪುಸ್ತಕವೆಂಬಂತೆ ಅವರಲ್ಲಿ ಸಹಜವಾಗಿ ಅವರ ಜೀವನದ ಅನುಭವಗಳು

ಆಳವಟ್ಟಿರುತ್ತವೆ. ಇವರ ಸಾಹಿತ್ಯವು ವಿವಿಧ ಮುಖಗಳಲ್ಲಿ ಅಭಿವ್ಯಕ್ತಗೊಂಡಿದೆ ಇವರಿಗೆ ಬಡ ಜನರ ಬಗ್ಗೆ ವಿಶೇಷ ಕಾಳಜಿ ಆಸಕ್ತಿ ಅವರ ಅಂತಃ ಕಾರಣಕ್ಕೆ ಸ್ಪಂದಿಸುವ ನೋವುಗಳನ್ನು ಕಣ್ಣಾರೆ ಕಂಡು ಮಿಡಿಯುವ ಗುಣವಿದೆ. ಅವರ ಹಲವು ಸಮಸ್ಯೆಗಳಿಗೆ ಪರಿಹಾರ ದೊರಕಿಸಿಕೊಡುವಲ್ಲಿಯೂ ಶ್ರಮಿಸಿದ್ದಾರೆ. ಅಂತಹ ಅನ್ಯಾಯ ಶೋಷಣೆಗೆ ಕಾರಣರಾದವರ ವಿರುದ್ಧ ಪ್ರತಿಭಟನೆಯ ಧ್ವನಿಯನ್ನು ಬರಹದ ಮೂಲಕ ಎತ್ತಿದ್ದನ್ನು ಕಾಣಬಹುದಾಗಿದೆ. ಮೇಲು-ಕೀಳು ಎನ್ನದೇ ಎಲ್ಲರನ್ನು ಪ್ರೀತಿಯಿಂದ ಕಾಣುವ ನೇರೆ ಮಾತಿನ ಗಂಭೀರ ಸ್ವಭಾವದ ಸರಳ ಜೀವಿ ದೇಶಾಂಶರು. ಶಾಲೆಯೊಂದರಲ್ಲಿ ಮರಾಠಿಯಲ್ಲಿ ಮಾತಾಡಿದ ಅಧಿಕಾರಿಯನ್ನು ತರಾಟಗೆ ತೆಗೆದುಕೊಂಡ ದೇಶಾಂಶ ಹುಡುಗಿ ಉಜ್ವಲ ಕನ್ನಡ ಪ್ರೇಮಿಯಾಗಿದ್ದಾರೆ. 'ಗ್ರಾಮ ಶಿಲ್ಪಿಗಳು' 'ನಾ ಕಂಡ ನನ್ನವರು' 'ಬದುಕಿನ ಸೂತ್ರ' 'ಧರಿನಾಡಿನ ಕಾವ್ಯ' ಇವು ಅವರ ಬರಹದ ಜೀವನದ ಜೀವಾಳವಾಗಿದೆ. ಇವರಲ್ಲಿ ಜನಪರ ಕಾಳಜಿ ಮಡುಗಟ್ಟಿ ನಿಂತಿರುವುದು ಸ್ಪಷ್ಟವಾಗುತ್ತದೆ.

## ಸಾಹಿತ್ಯ ಸಾಧನೆ (ಸೃಷ್ಟಿ):

ಸಾಹಿತಿಕವಾಗಿ ದೇಶಾಂಶ ಹುಡುಗಿಯವರ ಸೇವೆ ಸ್ಮರಣೀಯವಾದದ್ದು, ಮೂಲತಃ ಜನಪದ ಶೈಲಿಯನ್ನು ಬಳಸಿಕೊಂಡು ಕನ್ನಡ ಸಾಹಿತ್ಯ ಲೋಕಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಅವರ ಕಾವ್ಯ ಪ್ರತಿಭೆ ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿದೆ. ಇವರು ಕಾವ್ಯ ಸಂಪಾದನೆ, ಜೀವನ ಚರಿತ್ರೆ, ಅನುವಾದ ಚಿಂತನ, ವಿಚಾರ ಸಾಹಿತ್ಯ, ಅಂಕಣ ಬರಹ, ಕಥಾ ಸಂಕಲನ, ವಚನ ಸಾಹಿತ್ಯ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಕೃತಿ ರಚಿಸಿ ಅವುಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. ಅವುಗಳನ್ನು ವಿವರವಾಗಿ ಮುಂದಿನ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

## ಅಂಕಣಕಾರ ದೇಶಾಂಶ ಹುಡುಗಿ:

ಪರಿಸರದ ಏರುಪೇರು, ಸಾಮಾಜಿಕ ಅಸಮಾನತೆ ಪುಸಕ್ತ ಸನ್ನಿವೇಶದ ಅವಾಂತರಗಳ ಕಡೆಗೆ ಹೆಚ್ಚು ಮನ ಬಿಚ್ಚಾಡುವ ಪ್ರಜ್ಞಾವಂತ ದೇಶಾಂಶರು. ಹೀಗಾಗಿಯೇ ಅವರ ಅಂಕಣ ಬರಹಗಳು ಓದುಗರನ್ನೇ ನೇರವಾಗಿ ಪ್ರತಿನಿಧಿಸುತ್ತವೆ. ಪ್ರಸ್ತುತ ಸಮಸ್ಯೆಗಳನ್ನು ಸರಳವಾಗಿ ಜನತೆಗೆ ತಿಳಿಸುವುದು ಅವರ ಅಂಕಣ ಸಾಹಿತ್ಯದ ಜೀವಾಳ ದೇಶಾಂಶ ಹುಡುಗಿಯವರು ಉತ್ತರ ಕರ್ನಾಟಕ ಸಾಹಿತ್ಯ ಅಂಕಣಕಾರನಾಗಿ (೧೯೯೨–೯೩) ವರೆಗೆ ಸೇವೆಯನ್ನು ಸಲ್ಲಿಸಿದ್ದಾರೆ. ವಚನ ಕ್ರಾಂತಿಯ ಸಾಹಿತ್ಯ ಬರಹಗಾರನಾಗಿ, ಅಂಕಣಕಾರನಾಗಿ ಹಾಗೂ ಅನೇಕ ಪತ್ರಿಕೆಗಳಲ್ಲಿ ಸಾಹಿತ್ಯಿಕ ಬರಹಗಾರನಾಗಿಯೂ ಸೇವೆ ಸಲ್ಲಿಸಿದ್ದಾರೆ. ಪತ್ರಿಕಾ ರಂಗವು

ಅವರನ್ನು ಕವಿಯಾಗಿ, ಕಲಾವಿದರಾಗಿ, ಸಾಹಿತ್ಯ ವಿಮರ್ಶಕರಾಗಿ, ಚಿಂತನಶೀಲ ಬರಹಗಾರರಾಗಿ ರೂಪಿಸಿತು. ಶಾಂತಿಕಿರಣ, ಪಬ್ಲಿಕ್ ಪತ್ರಿಕೆ, ವಚನಕ್ರಾಂತಿ, ವಿಶ್ವಕಲ್ಯಾಣ ಹಾಗೂ ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಇವರ ಬಹುಮೂಲ್ಯ ಲೇಖನಗಳು ಮೂಡಿ ಬಂದವು. ಅವರ ಪ್ರಕಟಿತ ಬಿಡಿ ಕವನ, ವಚನ, ಲೇಖನಗಳ ಸಂಖ್ಯೆಃ ಹೆಚ್ಚು ಈ ವರೆಗೆ ಅವರು ೩೦ ಕ್ಕಿಂತ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೧೩ ಕೃತಿಗಳು ಪ್ರಕಟವಾಗಿವೆ. ಅವರ ಅಪ್ರಕಟಿತ ಕೃತಿಗಳ ಸಂಖ್ಯೆಯೇ ಹೆಚ್ಚಾಗಿದೆ. ಅವು ಕೆಳಗಿನಂತಿವೆ.

### ಅಪ್ರಕಟಿತ ಕೃತಿಗಳುಃ

೧. ಬಚ್ಚನ್ನನ ಮಧುಶಾಲಾ (ಅನುವಾದ).
೨. ಹುಂಬನ ಹಾಡುಗಳು (ದ್ವಿಪದಿಗಳು).
೩. ಬೀದರ ಜಿಲ್ಲೆಯಲ್ಲಿ ಕನ್ನಡ ಕಟ್ಟಿದವರು (ವ್ಯಕ್ತಿ ಚಿತ್ರಗಳು).
೪. ಅಷ್ಟೂರಿನ ಅಲ್ಲಮ ಪ್ರಭು ಅಹೃದಷ ಹವೆಲಿ.
೫. ಹೊಳಿಯ ನೂರು ಹಾಡುಗಳು.
೬. ಬಸವಣ್ಣನವರ ೧೫೦ ವಚನಗಳು (ಹಿಂದಿಗೆ ಅನುವಾದ).
೭. ಜನ ನಾಯಕ ಬಸವರಾಜ ಪಾಟೀಲ ಅಟ್ಟೂರು.
೮. ಹಿಂತಿರುಗಿ ನೋಡಿದಾಗ (ಆತ್ಮ ಚರಿತ್ರೆ).
೯. ಸುಂದರನ ಸಾಹಸ (ಕೆತೆ).
೧೦. ವಾಂತಿ (ಸಾಹಿತ್ಯಿಕ ಪ್ರಬಂಧಗಳು).
೧೧. ಸ್ವಾತಂತ್ರ್ಯ ಹೋರಾಟಗಾರರು (೪೦ ಜನರ ವ್ಯಕ್ತಿ ಚಿತ್ರಗಳು)
೧೨. ಧರಿನಾಡಿನ ಪದಕೋಶ.
೧೩. ಜಾನಪದ ಪ್ರಾಸಗಳು.
೧೪. ಹನಿ ಹನಿ ಹನಿ (ಹನಿಗವನಗಳು).

ಹೀಗೆ ಅನೇಕ ಕಾರಣಾಂತರದಿಂದ ಇವರ ಅನೇಕ ಸಾಹಿತ್ಯಿಕ ಕೃತಿಗಳು ಇನ್ನು ಅಚ್ಚುಗೊಳ್ಳದ ರೂಪದಲ್ಲಿವೆ. ದೇಶಾಂಶ ಹುಡುಗಿಯವರು ಬಹುಮುಖ ಪ್ರತಿಭಾ ಸಂಪನ್ನರು ಯಾವುದೇ ಕ್ಷೇತ್ರವಿರಲಿ ನಿಷ್ಠೆಯಿಂದ ದುಡಿಯುವ ಮನೋಭಾವದವರು.

ಹುಡುಗಿಯವರ ಕನ್ನಡ ಸೇವೆ ಅಗಾದವಾದದ್ದು, ಅದನ್ನು ಧರಿನಾಡು ಕನ್ನಡ ಸಂಘದ ಮೂಲಕ ಸಾಕರಗೊಳಿಸುತ್ತಾ ನಡೆದಿದ್ದಾರೆ.

- ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಕನ್ನಡ ಪ್ರಾರ್ಥನೆ ಹಾಡುವೆನೆಂದು ಹಟ ಹಿಡಿದು ಅಬ್ದುಲ್ ರಜಾಖ ಮುಖ್ಯೋಪಾಧ್ಯಾಯನಿಂದ ಏರುಗಟ್ಟಿ ಹೊಡೆಯಿಸಿಕೊಂಡದ್ದು.
- ಮುಡಬಿಯಲ್ಲಿ ಮರಾಠಿ ಹೈಸ್ಕೂಲ್ ಸ್ಥಾಪನೆ ವಿರುದ್ಧ ಏಕಾಂಗಿಯಾಗಿ ಪ್ರತಿಭಟಿಸಿದ್ದು.
- ಹುಡಗಿ ಹಾಗೂ ಮುಡಬಿ ಗ್ರಾಮಗಳಲ್ಲಿ ಸಾಹಿತ್ಯ ಪ್ರಚಾರ ಮಾಡಿದ್ದು.
- ಬಾಲ ವಿದ್ಯಾರ್ಥಿಯಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದು – ವಂದೇ ಮಾತರಂ ಹಾಡು ಹಾಡಿ ಬಾರುಕೋಲಿನಿಂದ ಹೊಡೆಯಿಸಿಕೊಂಡದ್ದು, ಅಲ್ಲಾ ಹೋ ಅಕ್ಬರ್ ಅನ್ನಲಾರನೆಂದು ಹಟ ಹಿಡಿದದ್ದು.
- ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ ಬೀದರದಿಂದ ಕನ್ನಡದಲ್ಲಿ ಶ್ರೀ ಮೌಲಿಕ ಕೃತಿಗಳನ್ನು ಪ್ರಕಟಿಸಿದ್ದು.
- ಕನ್ನಡ ಕವಿಗಳು ಹಾಗೂ ಸಾಹಿತಿಗಳನ್ನು ಪ್ರೋತ್ಸಾಹಿಸಿ ಲೇಖಕರ ಹಿಂಡನ್ನು ಕಟ್ಟಿದ್ದು, ಧರಿನಾಡು ಕನ್ನಡ ಸಂಘದ ಮೂಲಕ ಉದಯೋನ್ಮುಖ ಬರಹಗಾರರಿಗೆ ವೇದಿಕೆಯನ್ನು ಒದಗಿಸಿದ್ದು.
- ಕಛೇರಿಯಲ್ಲಿ ಕನ್ನಡ ಬಳಕೆ ಮಾಡುವಂತೆ ಸಹೋದ್ಯೋಗಿಗಳಿಗೆ ಪ್ರೋತ್ಸಾಹಿಸಿದ್ದು, ಒತ್ತಾಯಿಸಿದ್ದು, ಮೀರಿದವರ ಮೇಲೆ ಕ್ರಮ ಕೈಗೊಂಡದ್ದು.
- ಸಾಕ್ಷರತಾ ಆಂದೋಲನದಲ್ಲಿ ಕನ್ನಡ ಪ್ರಚಾರ ಮಾಡಿದ್ದು, ಅನ್ಯಭಾಷಿಕರಿಗೆ ಕನ್ನಡ ಕಲಿಸಿದ್ದು.
- ಬೀದರ ಕಮಲನಗರ, ಡೋಣಗಾಂವ, ಉದಗೀರ, ಭಾಲ್ಕಿ, ಬಸವಕಲ್ಯಾಣಗಳಲ್ಲಿ ಕನ್ನಡ ಸಾಹಿತ್ಯ ಕಾರ್ಯಕ್ರಮ ನಡೆಸಿದ್ದು, ಕಮಲನಗರದಲ್ಲಿ ಕತೆಗಾರ ಸಮ್ಮೇಳನ ಸಿದ್ದೇಶ್ವರದಲ್ಲಿ ೨೨–೧–೨೦೦೪ ರಲ್ಲಿ ಧರಿನಾಡಿನ ಕನ್ನಡ ಸಾಹಿತ್ಯ ಸಮ್ಮೇಳನ ತಾಲೂಕಾ ಮಟ್ಟದಲ್ಲಿ ನಡೆಸಿದ್ದು, ೨೬–೧೨–೨೦೦೪ ರಂದು ಜ್ಯೋತಿ ಲಿಂಗಾಶ್ರಮ ಯರಬಾಗದಲ್ಲಿ ಬಸವಕಲ್ಯಾಣ ತಾಲೂಕು ಮಟ್ಟದ ಧರಿನಾಡು ಕನ್ನಡ ಸಾಹಿತ್ಯ ಸಮ್ಮೇಳನ ನಡೆಸಿದ್ದು, ಔರಾದ

ತಾಲೂಕಿನಲ್ಲಿ ವಲಯ ಮಟ್ಟದ ಸಾಹಿತ್ಯ ಸಮ್ಮೇಳನ ನಡೆಸಿದ್ದು (ಕ.ಸಾ.ಪ. ನೆರವಿನೊಂದಿಗೆ).

ಹೀಗೆ ದೇಶಾಂಶ ಹುಡುಗಿಯವರು ಬಾಲ್ಯದಿಂದಲೇ ಕನ್ನಡಪರ ಹೋರಾಟವನ್ನು ಮಾಡುತ್ತಾ ಬಂದಿದ್ದಾರೆ ಮತ್ತು ಮಾಡುತ್ತಿದ್ದಾರೆ.

## ಗೌರವ ಪ್ರಶಸ್ತಿಃ

ಯಾವ ಪ್ರಶಸ್ತಿಗೂ ಅವರು ಆಶೆ ಪಟ್ಟವರಲ್ಲ. ಅವರಿಗೆ ದೊರೆತ ಪ್ರಶಸ್ತಿಗಳಿಗಿಂತ ಎಷ್ಟೋ ಹೆಚ್ಚು ಗೌರವ ಪ್ರಶಸ್ತಿಗಳನ್ನು ಸಮಾಜದಿಂದ ಪಡೆದುಕೊಂಡಿದ್ದಾರೆ. ವಿದ್ಯಾರ್ಥಿಗಳ ಮನ ಮೆಚ್ಚುಗೆಯನ್ನು ಪಡೆದಿದ್ದಾರೆ. ಇವರ ವಿದ್ಯಾರ್ಥಿಗಳು ಎಷ್ಟೋ ಜನ ಈಗ ಒಳ್ಳೆಯ ಹುದ್ದೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ತಮ್ಮ ಅಪೂರ್ವವಾದ ಬರವಣಿಯಿಂದ ಜನಮನ ಸೊದೆಗೊಂಡ ದೇಶಾಂಶ ಹುಡುಗಿ ಅವರಿಗೆ ಅರಸಿ ಬಂದ ಪ್ರಶಸ್ತಿಗಳು, ಸನ್ಮಾನಗಳು, ದೊರೆತಂತಹ ಸ್ಥಾನ ಮಾನ ಗೌರವಗಳು ಅಪಾರ. ಆದರೂ ಅವುಗಳಲ್ಲಿ ಕೆಲವು ಹೀಗಿವೆ.

- ಭಾಲ್ಕಿ ತಾಲೂಕಾ ಉತ್ತಮ ಹೈಸ್ಕೂಲ್ ಶಿಕ್ಷಕನೆಂದು ಸನ್ಮಾನಿಸಲಾಯಿತು (೧೯೯೮).
- ಜಿಲ್ಲಾ ಮಟ್ಟದಲ್ಲಿ ಉತ್ತಮ ರಂಗ ಸೇವೆಗಾಗಿ ಗೌರವ ಪುರಸ್ಕಾರ ೧೯೯೩.
- ಜಿಲ್ಲಾ ಮಟ್ಟದಲ್ಲಿ ಜಾನಪದ ಸೇವೆಗಾಗಿ ಸನ್ಮಾನಿಸಲಾಯಿತು ೧೯೯೬.
- ಜಿಲ್ಲಾ ಮಟ್ಟದಲ್ಲಿ ಕನ್ನಡ ಸೇವೆಗಾಗಿ ಪುರಸ್ಕರಿಸಲಾಯಿತು ೧೯೯೬.
- ಚೆನ್ನಬಸವ ಪಟ್ಟದ್ದೇವರು ಕನ್ನಡ ಸಂಘದಿಂದ ಜಿಲ್ಲಾ ಮಟ್ಟದ ಉತ್ತಮ ಸಾಹಿತಿಯೆಂದು (೨೦೦೩) ರಲ್ಲಿ ಗೌರವಿಸಲಾಯಿತು.
- ಕನನಡ ಸಂಘ ಗ್ರಾಮೀಣ ಇಂಜಿನೀಯರಿಂಗ್ ಕಾಲೇಜು ಭಾಲ್ಕಿಯಿಂದ ಜಿಲ್ಲಾ ಮಟ್ಟದ ಉತ್ತಮ ಭಾವಗೀತೆಕಾರನಾಗಿ ೨೦೦೩ ರಲ್ಲಿ ಸನ್ಮಾನಿಸಲಾಯಿತು.

- ರಾಜ್ಯ ಮಟ್ಟದ ಕಾಯಕ ಸನ್ಮಾನ ಪ್ರಶಸ್ತಿ ೨೦೦೩ ನೇ ಸಾಲಿಗಾಗಿ ಉದಯೋನ್ಮುಖ ಯುವ ಬರಹಗಾರರ ಬಳಗ ಗುಲಬರ್ಗಾದಿಂದ ನೀಡಲಾಯಿತು.
- ೮ನೇ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ೨೦೦೪ ನೇ ಇಸವಿಯಲ್ಲಿ ಗೌರವ ನೀಡಲಾಯಿತು.
- ದಿನಾಂಕಃ ೦೫-೦೬-೨೦೦೫ ರಂದು ದೇಶಾಂಶ ಹುಡುಗಿ ಅಭಿನಂದನಾ ಸಮಿತಿ ಬೀದರ ವತಿಯಿಂದ 'ಚೇತನ ಶಿಲ್ಪಿ' ಅಭಿನಂದನಾ ಕೃತಿ ಸಮರ್ಪಣೆ ಹಾಗೂ ಸನ್ಮಾನಿಸಲಾಯಿತು.
- ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಇವರಿಂದ ಸುವರ್ಣ ಕರ್ನಾಟಕ ಗೌರವ ಪುಸ್ಕಾರ (೨೦೦೭ ರಲ್ಲಿ).
- ದಿನಾಂಕಃ ೩-೯-೨೦೦೮ ರಂದು ಹುಮನಾಬಾದನ ಧರಿನಾಡು ಸಂಘದ ವತಿಯಿಂದ 'ಗಡಿನಾಡ ಕನ್ನಡ ಸಿರಿ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು.

ಹೀಗೆ ಇವರಿಗೆ ಹುಡುಕಿಕೊಂಡು ಬಂದ ಗೌರವ ಪ್ರಶಸ್ತಿಗಳ ಪಟ್ಟ ಬೆಳೆಯುತ್ತದೆ. ದೇಶಾಂಶ ಹುಡುಗಿ ಅವರು ತಮ್ಮ ಸರಳ ಶೈಲಿಯ ಉದಾತ್ತ ಜೀವನದೊಂದಿಗೆ ತಮ್ಮ ಅಪ್ರತಿಮವಾದ ಬರಹಗಳ ಮೂಲಕ ಅನೇಕ ಸ್ಥಾನಮಾನ ಗೌರವಗಳನ್ನು ಪಡೆಯುವ ಮುಖಾಂತರ ಕನ್ನಡ ಭಾಷೆಗೆ ಕನ್ನಡ ನಾಡಿಗೆ ಕೀರ್ತಿಯನ್ನು ತಂದಿದ್ದಾರೆ.

## ವ್ಯಕ್ತಿತ್ವಃ

ಎಲ್ಲರನ್ನು ತುಂಬಾ ನಗು ಮೊಗದಿಂದ 'ಏನ್ರಿ ಆರಾಮ ಇದ್ದೀರಾ' ಎಂದು ಪೀಠಿಕೆ ಹಾಕುತ್ತ ಮಾತನಾಡುವ 'ದೇಶಾಂಶ'ರದು ಎಲ್ಲೆಲ್ಲೂ ಎದ್ದು ಕಾಣುವ ಸಹೋದರ ಪ್ರೀತಿ, ಯಾವಾಗಲೋ ಒಮ್ಮೆ ನೋಡಿದ್ದರೂ ಸಹ ಅವರನ್ನು ಕಂಡಾಕ್ಷಣ ತಮ್ಮ ಹೊಳಪುಗಣ್ಣಿನಿಂದ ಗುರುತಿಸಿ ಮಾತನಾಡಿಸುವರು. ಮುಗುಳ್ನಗೆಯ ಮುಖದ ಬಿಳಿ ಮೀಸೆಯ ಹುಡುಗ ಹುಡುಗಿಯವರು ದೇಶಾಂಶ ಹುಡುಗಿ ಎಂಬ ಕಾವ್ಯನಾಮದಿಂದ ಬೀದರ ಜಿಲ್ಲೆಯಲ್ಲಿ ಹೆಸರು ಮಾಡಿರುವ ಶಾಂತಪ್ಪ ದೇವರಾಯ ಅವರು ಹುಮನಾಬಾದ ಜಿಲ್ಲೆಯ ಹುಡುಗಿಯವರು ಸಮರ್ಥ ಶಿಕ್ಷಕರಾಗಿದ್ದುಕೊಂಡು ಕವಿಗಳಾಗಿ ಬೆಳೆದವರು. ತಾಲೂಕಿನ ವಯಸ್ಕ

ಶಿಕ್ಷಣಾಧಿಕಾರಿಗಳಾಗಿ ಶಾಲಾ ತನಿಖಾಧಿಕಾರಿಗಳಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿದ್ದಾರೆ. ೮೦ ರ ವಯಸ್ಸಿನಲ್ಲಿಯೂ ಚಿಲುಮೆಯಂತೆ ಚಿಮ್ಮುವ ಅವರ ಕಾರ್ಯವೈಖರಿ ಬೆರಗು ಮೂಡಿಸುತ್ತದೆ.

'ದೇಶಾಂಶ'ರು ಗಂಭೀರ ಸ್ವಭಾವದ ಸರಳಜೀವಿ ಸರಳ ಉಡುಪು ಸರಳನಡೆ–ನುಡಿ ಹಿರಿ ಕಿರಿಯರಿಗೂ ಗೌರವದಿಂದ ಕಾಣುವ ವ್ಯಕ್ತಿತ್ವ ಆಕರ್ಷಣೀಯವಾದುದು. ಅವರ ಮಾತು ಕವನಗಳಂತೆ ರಸಭರಿತ[7] ರಸಿಕ ಮನದ ಮುದುಕನಾತ ಅವರ ಕವನ ಚುಟುಕುಗಳಲ್ಲಿ ಅದೇ ಧ್ವನಿ, ನವಿರಾದ ಹಾಸ್ಯ, ಚಾಟಿ ಏಟುಕೊಡುವ ಪದಗಳನ್ನು ಕಾಣಬಹುದು. ವಾಚ್ಯ–ಸೂಚ್ಯಗಳೆರಡನ್ನೂ ಮಿಶ್ರಣ ಮಾಡಿ ಹೇಳುವ ಅವರ ಮನೋಭಾವ ಎಲ್ಲೆಲ್ಲೂ ಎದ್ದು ಕಾಣುತ್ತದೆ. ಅನ್ಯಾಯ, ಅತ್ಯಾಚಾರ, ಶೋಷಣೆ ಭ್ರಷ್ಟತನಗಳನ್ನು ತಮ್ಮ ಕವನಗಳಲ್ಲಿ ನಿರ್ಭಿಡೆಯಿಂದ ಖಂಡಿಸುವ ಅವರ ಜೀವನ ವಿಧನಾವೂ ಹಾಗೆಯೇ ಇದೆ.

ದೇಶಾಂಶರ ಜೀವನ ಪ್ರೀತಿ ಅಪ್ರತಿಮವಾದುದು. ಕಣ್ಣಿಗೆ ಕನ್ನಡಕ ಬಂದಿಲ್ಲ, ಕೃತಕ ದಂತಗಳ ಸೆಟ್ಟು ಉಪಯೋಗಿಸುವುದಿಲ್ಲ. ೮೦ ವರ್ಷವಾಗಿದ್ದರೂ ಕೈಯಲ್ಲಿ ಆಸರೆಗೆಂದು ಬಡಿಗಿ ಹಿಡಿದಿಲ್ಲ. ಬಗಲಲ್ಲಿ ಕೈಚೀಲ ಮಾತ್ರ ಸದಾ ಇರುತ್ತದೆ. ಅದರೊಳಗೊಂದು ನೋಟ್‌ಬುಕ್ ಅದರಲ್ಲಿ ಅವರು ನೋಡಿದ್ದನ್ನು ಸಭೆ ಸಮ್ಮೇಳನಗಳಲ್ಲಿ ಕೇಳಿದ್ದನ್ನು, ಓದಿದ ಪುಸ್ತಕದ ಅವತರಣಿಕೆಗಳನ್ನು ಬರೆದಿಟ್ಟಿರುತ್ತಾರೆ. ಆ ನೋಟ್‌ಬುಕ್ ಒಂದು ಪುಟ್ಟ ವಿಸ್ಮಯ ಪ್ರಪಂಚ. ಬೀದರ ಜಿಲ್ಲೆಯಲ್ಲಿ ಅವರಂತಹ ಉತ್ಸಾಹಿ ಲೇಖಕರು ಮತ್ತೊಬ್ಬರಿಲ್ಲ[8] ಎನ್ನುವ ಮಾತು ಒಪ್ಪುವಂತಹದ್ದು.

ಅನೇಕ ಹೋರಾಟದ ಬದುಕಿನಲ್ಲಿಯೇ ಶಿಕ್ಷಣ ಮುಗಿಸಿರುವ ದೇವರಾಯ ಶಾಂತಪ್ಪನವರು ಶ್ರಮ ಜೀವಿಗಳು ಮನಮುಟ್ಟುವಂತೆ ಓದಿ ವಿದ್ಯಾಪಾರಂಗತರಾದವರು. ನೆಚ್ಚಿನ ಗುರುಗಳ ಮೆಚ್ಚುಗಿ ಪಡೆದು ದ್ವಾಂಸರಾದರು. ಶಾಲೆಯೊಂದರಲ್ಲಿ ಮರಾಠಿಯಲ್ಲಿ ಮಾತನಾಡಿದ ಅಧಿಕಾರಿಯನ್ನು ತರಾಟೆಗೆ ತೆಗೆದುಕೊಂಡ ಇವರು ಇಂದಿಗೂ ಅನನ್ಯ ಕನ್ನಡ ಪ್ರೇಮಿಗಳಾಗಿದ್ದಾರೆ. ಅದಕ್ಕಿಂತಲೂ ಮಿಗಿಲಾಗಿದ್ದುದು ಅವರ ಸ್ವಾಭಿಮಾನ ಕನ್ನಡ ಪ್ರೇಮ, ವಚನ ಸಾಹಿತ್ಯದ ಆರಾಧನೆಯ ಜೊತೆ ಜೊತೆಗೆ ಅವರ ರಕ್ತದ ಕಣ ಕಣದಲ್ಲಿಯೂ

---

[7] ಸುಬಣ್ಣ ಅಂಬಸಂಗೆ – ಶ್ರಮಜೀವಿ – ಚೇತನ ಶಿಲ್ಪಿ – ಪು ಇದಿ

[8] ವೀರೇಂದ್ರ ಸಿಂಪಿ–ನಾ ಕಂಡ ದೇಶಾಂಶ ಹುಡಗಿ – ಪು ೩೬.

ರಾಷ್ಟ್ರಾಭಿಮಾನ ಉಕ್ಕಿ ಹರಿಯುತ್ತದೆ. ಬಾಲಕರಿದ್ದಾಗಲೇ 'ವಂದೇ ಮಾತರಂ' ಎನ್ನುತ್ತ ತಮ್ಮ ಸಂಗಡಿಗರೊಂದಿಗೆ ಓಡಾಡಿದ ಅವರು ಹಟವಾದಿಯೂ ಆಗಿದ್ದರು.

ದೇಶಾಂಶರ ವ್ಯಕ್ತಿತ್ವದ ವೈಶಿಷ್ಟ್ಯವೆಂದರೆ ಜೀವನೋತ್ಸಾಹ ಅದನ್ನು ಸದಾ ಉಳಿಸಿಕೊಂಡು ಬಂದಿರುವ ಅವರ ಇಂದಿನ ಯುವ ಪೀಳಿಗೆಗೆ ಮಾರ್ಗದರ್ಶಕರಾಗಿದ್ದಾರೆ. ಜೀವನ ಮೌಲ್ಯಗಳಿಗಾಗಿ ಎಂಥ ವಿರೋಧವನ್ನು ಎದುರಿಸಬಲ್ಲ. ಪುರುಷತ್ವ ಅವರಲ್ಲಿದೆ ಎಂದೂ ತಮ್ಮ ಆದರ್ಶಗಳನ್ನು ತ್ಯಜಿಸಿ, ಅವಕಾಶವಾದಿಗಳಂತೆ ರಾಜಿ ಮಾಡಿಕೊಂಡು ಬದುಕಿದವರಲ್ಲ ಅವರ ಪ್ರಾಮಾಣೀಕತೆಗೆ ಇಲ್ಲಿ ಎಂಥವರೂ ತಲೆ ಬಾಗಿಸುತ್ತಾರೆ.

ಸದಾ ಅಧ್ಯಯನ ಶೀತರಾಗಿರುವ ದೇಶಾಂಶ ಹುಡುಗಿಯವರು ಸಾಹಿತ್ಯಿಕವಾಗಿಯೂ, ಸತ್ವಯುತವಾಗಿ ಬರೆದವರು ವೃತ್ತಿಯಿಂದ ಶಿಕ್ಷಕರಾಗಿ ಪ್ರವೃತ್ತಿಯಿಂದ ಸಾಹಿತಿಯಾದರು. ಶಾಲಾ ಮಕ್ಕಳ ಮನದಲ್ಲಿ ಸದಾ ಸಾಹಿತ್ಯ ಹಾಗೂ ಸಂಸ್ಕೃತಿಯ ಬೀಜ ಬಿತ್ತಿ ಬೆಳೆದರು. ಅವರ ಬದುಕಿನ ಸುತ್ತು 'ನಾ ಕಂಡ ನನ್ನವರು' ಮೊದಲಾದ ಕೃತಿಗಳು ಬೀದರ ಜಿಲ್ಲೆಯ ಸೃಜನಾತ್ಮಕ ಸಾಹಿತ್ಯವನ್ನು ಪರಿಚಯಿಸುವಂತಹ ಕೃತಿಗಳು ಜಾನಪದ ಸೊಗಡನ್ನು ಬಳಸಿಕೊಂಡು ಬರೆಯುತ್ತಿರುವ ಇವರ ಕವನಗಳಿಗೆ ಇವರದೇ ಆದ ವ್ಯಕ್ತಿಕತ್ವದ ವೈಶಿಷ್ಟಗಳಿರುವುದನ್ನು ಕಾಣಬಹುದು.

ಶಾಂತಪ್ಪನವರದು ಕೇವಲ ಸಾಹಿತ್ಯಕ್ಕಷ್ಟೇ ಸೀಮಿತವಾದ ವ್ಯಕ್ತಿತ್ವವಲ್ಲ. ಜಿಲ್ಲೆಯಲ್ಲಿ 'ಧರಿನಾಡು ಕನ್ನಡ ಸಂಘ' ಕಟ್ಟಿ ಬೆಳೆಸಿದರು. ಪುಸ್ತಕ ಪ್ರಕಟಣೆಯ ಬಿರುಗಾಳಿಯನ್ನೇ ಎಬ್ಬಿಸಿದ ಆ ಸಂಸ್ಥೆಯ ಮೂಲಕ ಈ ೫೨ ಕನ್ನಡ ಪುಸ್ತಕಗಳನ್ನು ಪ್ರಕಟಿಸಿದರು. ಈಗ ಹೆಮ್ಮರವಾಗಿ ಬೆಳೆದು ನಿಂತಿರುವ ಈ ಕನ್ನಡ ಸಂಘ ಜಿಲ್ಲೆಯ ಹೊರಗೂ, ಅಂತರಾಜ್ಯ ಮಟ್ಟದಲ್ಲೂ ವ್ಯಾಪಿಸಿಕೊಳ್ಳುವ ಸಂಭ್ರಮದಲ್ಲಿದೆ. ಈ ಸಂಘದಿಂದ ಜಿಲ್ಲೆಯ ಸಾಹಿತ್ಯಕ್ಕೆ ಯುವ ಮತ್ತು ಮಹಿಳಾ ಸಾಹಿತಿಗಳಿಗೆ ಬೇಕಾದಷ್ಟು ಪ್ರೋತ್ಸಾಹ ದೊರೆಯಿತು.

ಒಟ್ಟಿನಲ್ಲಿ ಶಿವಶಂಕರ ಟೋಕರೆ ಹೇಳುವಂತೆ 'ಧರಿನಾಡು ಕನ್ನಡ ಸಂಘದಿಂದ ದಂದಣ ದತ್ತಣ' ಎನ್ನುತ್ತ ಇಳಿವಯಸ್ಸಿನಲ್ಲೂ ಧರಿನಾಡಿನ ದುಂದುಭಿಗಳಾಗಿ ದೇಶಾಂಶರು ಕಿಂಕರತೆಯಿಂದ ಛಲಬಿಡದ ವಿಕ್ರಮನಂತೆ ಸೇವೆ ಗೈಯುತ್ತಿದ್ದಾರೆ.

ಕನ್ನಡ, ಮರಾಠಿ, ಉರ್ದು, ಮೋಡಿ, ಹಿಂದಿ ಹಾಗೂ ಇಂಗ್ಲೀಷ ಭಾಷೆಗಳನ್ನು ಚೆನ್ನಾಗಿ ಬಲ್ಲ ಇವರು ಕನ್ನಡದ ಕಂಪನ್ನು ಧರಿನಾಡಿನಲ್ಲಿ

ಕಂಗೊಳಿಸುವಂತೆ ಮಾಡಿದರು. ಸಾಂಘಿಕ ಜೀವಿಯಾಗಿರುವ ಇವರು ರಂಗ ಕಲಾವಿದರೂ ಆಗಿದ್ದರು. ತತ್ವಪದಕಾರ ಹಾಗೂ ಜನಪದ ಹಾಡುಗಾರರಾಗಿ ಈ ಕೆಂಪು ನೆಲದಲ್ಲಿ ಕನ್ನಡದ ಕಿಚ್ಚು ಹಚ್ಚಿದರು. ಕಾವ್ಯದಲ್ಲಿ ಹೊಸತನ, ಅಭಿವ್ಯಕ್ತಿಯಲ್ಲಿ ಹಾಸ್ಯ ತಂದ, ಈ ಜಿಲ್ಲೆಯ ಕನ್ನಡವನ್ನು ಬೆಳಕಿಗೆ ತರಲು ಪ್ರಯತ್ನಿಸಿದರು. ನೀತಿಯಿಂದ ನಿಷ್ಠುರವಾದಿ, ಶಾಂತಿಯಿಂದ ಸ್ನೇಹ ಜೀವಿಯಾಗಿರುವ ದೇಶಾಂಶರು ಬಿಚ್ಚು ಮನದ ಕನ್ನಡ ಕುವರ ಚಿಂತನೆ, ಸರಳತೆ, ಅದಮ್ಯ ಉತ್ಸಾಹಿ ವ್ಯಕ್ತಿತ್ವವಿರುವ ಇವರ ದೂರದಶಿತ್ವ ಮನೋಭಾವಕ್ಕೆ ಎಲ್ಲರೂ ಮಣಿಯಲೇಬೇಕು.

ತಾಲೂಕಿನ ಉತ್ತಮ ಶಿಕ್ಷಕ, ಪತ್ರಿಕೆ ಬರಹಗಾರ, ನಾಟಕ ಕರ್ಮಿ, ಕಲೆಗಾರ, ರಂಗ ಸೇವಕ, ಜಾನಪದ ಹಾಡುಗಾರ, ಸಾಹಿತಿ, ಹಾಸ್ಯಗಾರ, ಉತ್ತಮ ಅಧಿಕಾರಿ, ಸಮಾಜ ಸೇವಕ, ಕನ್ನಡದ ಕಟ್ಟಾಳು ಎಂದೆಲ್ಲ ಕರೆಸಿಕೊಳ್ಳಬಹುದಾದ ದೇವರಾಯ ಶಾಂತಪ್ಪ ಶರಣಪ್ಪನವರು ಒಳ್ಳೆಯ ಭಾಷಣಕಾರರೂ ಆಗಿದ್ದಾರೆ. ಸಾಕ್ಷರತಾ ಆಂದೋಲನಕ್ಕೆ ಹೊಸ ಜೀವನ ತುಂಬಿದ ಇವರ ಕಾರ್ಯ ಸ್ತುತ್ಯಾರ್ಹವಾದುದು. ಮಿರ್ಚಿ ಭಜಿ, ಬಾಸುಂದಿ, ಹೆಂಡತಿ ಮಹಾದೇವಿ ಮಾಡಿದ ಆಂಬುರ್‌ವನ್ನು ಸದಾ ಇಷ್ಟಪಡುವ ದೇಶಾಂಶ 'ವ್ಯಕ್ತಿತ್ವ' ಅಪರೂಪವಾದದ್ದೆಂದು ಹೇಳಬಹುದು. ಇದರ ವ್ಯಾಪಕತೆಯನ್ನು ಅವರ ಕೃತಿಗಳ ಸಮಗ್ರ ಅಧ್ಯಯನದಲ್ಲಿ ಇನ್ನೂ ಗುರುತಿಸಬಹುದಾಗಿದೆ.

# ‘ದೇಶಾಂಶ’ ರವರ ಸಮಗ್ರ ಸಾಹಿತ್ಯ ಕೃತಿಗಳು

## ಭಾಗ-೧ ಕಾವ್ಯಃ ಸಾಂಸ್ಕೃತಿಕ ಒಳನೋಟಗಳು.

ಕನ್ನಡ ಕಾವ್ಯಕ್ಕೆ ಸಾವಿರಾರು ವರ್ಷಗಳ ಚರಿತ್ರೆಯಿದೆ. ಇಂತಹ ಪರಂಪರೆಯಲ್ಲಿ ಕನ್ನಡ ನಾಡಿನಲ್ಲಿ ಘಟಿಸಿದ ಹಲವು ಸಾಂಸ್ಕೃತಿಕ ಬದಲಾವಣೆಗಳಿಂದಾಗಿ ಅನೇಕ ರೀತಿಯ ವಿವಿಧತೆಗಳು ಹಾಗೂ ಅದಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕಾಣುವಂತಾಗಿದೆ. ಆರಂಭದಲ್ಲಿ ಚಂಪೂಯುಗವು ಪಂಪ, ಪೊನ್ನ, ರನ್ನ ರಿಂದಾಗಿ ಮೆರೆದರೂ ಅದು ಕೆಲವೇ ವರ್ಷಗಳಲ್ಲಿ ಮರೆಯಾಯಿತು. ೧೨ ನೆಯ ಶತಮಾನದಲ್ಲಿ ವಚನ ವಾಙ್ಮಯವು ಜನ ಸಾಮಾನ್ಯರ ಧ್ವನಿಯಾಗಿ ಮೂಡಿನಿಂತು, ಚಂಪೂ ಸಾಹಿತ್ಯವನ್ನು ಹಿಂದಿಕ್ಕಿತು ಹಾಗೂ ತನ್ನದೇ ಆದ ದೀಶಿಯತೆಯನ್ನು ಮೆರೆಯಿತು. ನಂತರದ ಹರಿಹರ ಕುಮಾರವ್ಯಾಸ, ಚಾಮರಸ, ಕವಿಗಳಂತಹವರ ಕಾವ್ಯಗಳಲ್ಲಿ ಜನಪರ ಕಾಳಜಿ ಪ್ರಮುಖ ಸ್ಥಾನ ಪಡೆಯಿತು. ೧೬ ನೆಯ ಶತಮಾನದ ದಾಸ ಸಾಹಿತ್ಯ ಜನರ ಮನೆಗೆ ಭಕ್ತಿ ಸಾಹಿತ್ಯವನ್ನು ತಂದು ಸಂಗೀತದ ಮೂಲಕ ಉಣಬಡಿಸಿತು. ಹಾಗೂ ಈ ಸಂದರ್ಭದಲ್ಲಿ ಕೀರ್ತನ ಸಾಹಿತ್ಯ ಜನ್ಮ ತಾಳಿತು. ೧೯ ನೆಯ ಶತಮಾನದ ಕೊನೆಯಲ್ಲಿ ಹೊಸಗನ್ನಡ ಸಾಹಿತ್ಯದ ಅರುಣೋದಯವು ಮುದ್ದಣ್ಣನಿಂದ ಆರಂಭಗೊಂಡು ಸಾಹಿತ್ಯದಲ್ಲಿ ಆಧುನಿಕತೆಯನ್ನು ತಂದು ನಿಲ್ಲಿಸಿತು.

ನಂತರದ ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯವು ಪಾಶ್ಚಾತ್ಯರ ಪ್ರೇರಣೆ, ಪ್ರಭಾವಗಳಿಗೆ ಒಳಗಾಗಿ ತನ್ನ ಹೊಸ ಸಾಧ್ಯತೆಗಳನ್ನು ಅಭಿವ್ಯಕ್ತಿಸಲು ಸಿದ್ಧವಾಯಿತು. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ನವೋದಯ ಪ್ರಗತಿಶೀಲ, ನವ್ಯ, ಬಂಡಾಯ ಹಾಗೂ ನವ್ಯೋತ್ತರಗಳೆಂಬ ಹೊಸ ಸಾಹಿತ್ಯ ಪಂಥಗಳು ಬಂದು ಹೋದವು. ಆದರೆ ಬೀದರದಲ್ಲಿ ಹೊಸ ಕಾವ್ಯ ಕಾಣಿಸಿಕೊಂಡದ್ದು ೧೯೬೦ ನಂತರದಲ್ಲಿ. ಆದರೂ ಸಹ ದೇಶಾಂಶ ಹುಡಗಿಯವರು ಮೊಟ್ಟ ಮೊದಲು ತಮ್ಮ ಕಾವ್ಯವನ್ನು ‘ಬದುಕಿನ ಸುತ್ತ’ ಹೊರತಂದದ್ದು ೧೯೮೮ ರಲ್ಲಿ ಖಡ್ಗೆ ಪ್ರಕಾಶನ ಬೀದರದಿಂದ ಪ್ರಕಟಗೊಂಡಿರುವ ಈ ಕವನ ಸಂಕಲನಕ್ಕಿಂತ ಮೊದಲು ಅವರು ಅಲ್ಲಲ್ಲಿ ತಮ್ಮ ಬಿಡಿಗವನಗಳನ್ನು ಪ್ರಕಟಪಡಿಸಿದ್ದರು. ಅದಲ್ಲದೇ ಅವರ ವ್ಯಕ್ತಿ ಚಿತ್ರಗಳ ಕೃತಿ ಗ್ರಾಮ ಶಿಲ್ಪಿಗಳು ೧೯೮೦ರಲ್ಲಿಯೇ ಪ್ರಕಟವಾಗಿ ಜನಮನ ಸೆಳೆದಿತ್ತು.

'ದೇಶಾಂಶ ಹುಡಗಿ'ಯವ ಕಾವ್ಯ ಪ್ರಮುಖವಾಗಿ ಮೂರು ಧಾರೆಗಳಲ್ಲಿ ಪ್ರವಹಿಸಿರುವುದನ್ನು ಗುರುತಿಸಬಹುದಾಗಿದೆ. ಈಗಾಗಲೇ ೧೮ ಕೃತಿಗಳನ್ನು ಪ್ರಕಟಪಡಿಸಿರುವ ಅವರು ೩ ಸ್ವಂತ ಕಾವ್ಯ ಸಂಕಲನಗಳನ್ನು ಹೊರ ತಂದಿದ್ದಾರೆ. 'ಧರಿನಾಡಿನ ಕಾವ್ಯ' ಹಾಗೂ ಕಾವ್ಯ ಕಾರಂಜಿಗಳು ಅವರ ಸಂಪಾದಿತ ಕವನ ಸಂಕಲನಗಳಾಗಿವೆ. ಅವರು ಸ್ವಂತ ಬರೆದು ಪ್ರಕಟಿಸಿದ ೩ ಕವನ ಸಂಕಲನಗಳೆಂದರೆ,

೧. ಬದುಕಿನ ಸುತ್ತ (೧೯೮೮)
೨. ಅಕ್ಷರ ಜ್ಯೋತಿ (೧೯೯೩)
೩. ದಿಗಂಬರ ವಚನಗಳು (೨೦೦೬)

ಇವುಗಳಲ್ಲಿ ಮೊದಲನೆಯದು ಹಾಗೂ ಎರಡನೆಯದು ಕವನಗಳ ಸಂಕಲನವಾದರೆ ಮೂರನೆಯದು ಅವರೇ ರಚಿಸಿರುವ ಆಧುನಿಕ ವಚನಗಳ ಸಂಕಲನವಾಗಿದೆ. ಇದಲ್ಲದೆ ಅಲ್ಲಲ್ಲಿ ಕೆಲವು ಚುಟುಕುಗಳನ್ನು ಅವರು ಬಿಡಿ ಬಿಡಿಯಾಗಿ ರಚಿಸಿ ಕಾವ್ಯದಲ್ಲಿ ವೈವಿಧ್ಯತೆ ಮೆರೆದಿದ್ದಾರೆ. ಹೀಗೆ ಕವನ, ವಚನ ಹಾಗೂ ಚುಟುಕುಗಳಲ್ಲಿ ಅಭಿವ್ಯಕ್ತಗೊಂಡಿರುವ ದೇಶಾಂಶ ಹುಡಗಿಯವರ ಕಾವ್ಯವನ್ನು ಅರ್ಥೈಸಿಕೊಂಡು ಅಧ್ಯಯನ ಮಾಡುವುದಕ್ಕಾಗಿ,

೧. ಆಶಯ ಮತ್ತು ಅಭಿವ್ಯಕ್ತಿ
೨. ಸಾಮಾಜಿಕ ಕಾಳಜಿ.
೩. ಜೀವನ ದರ್ಶನ ಮತ್ತು
೪. ಸಾಕ್ಷರತಾ ತತ್ವ.

ಎಂಬ ವಿಭಜನೆಯಲ್ಲಿ ವಿವರಿಸಿಕೊಂಡು ವಿವೇಚಿಸಲಾಗಿದೆ.

## ೧. ಆಶಯ ಮತ್ತು ಅಭಿವ್ಯಕ್ತಿಃ

ತಾವು ಒಲಿದಂತೆ ಹಾಡಿರುವ ದೇಶಾಂಶರ ಕವಿತೆಗಳಲ್ಲಿ ಕನ್ನಡದ ಕಳಕಳಿ, ರಾಷ್ಟ್ರಾಭಿಮಾನ, ಸಾಕ್ಷರತೆಯ ಮನೋಭಾವ, ಸಾಮಾಜಿಕ ಚಿಂತನೆಗಳ ಆಶಯಗಳು ತುಂಬಿಕೊಂಡಿದ್ದು, ಸಮಾನತೆಯ ಜೀವನವಿರಬೇಕೆಂಬ ಆಶಾಭಾವನೆಯಲ್ಲಿ ರಚಿತಗೊಂಡಿವೆ. ತಮ್ಮ ಜೀವನದ ರೀತಿಯನ್ನೇ ಅಭಿವ್ಯಕ್ತಿಯಾಗಿಸಿ ಕವಿತ್ವದಲ್ಲಿ ಒಡ ಮೂಡಿಸಲು ಪ್ರಯತ್ನಿಸಿರುವ ಕವಿಗೆ ಕಾವ್ಯವು ಸಮಾಜ ಸುಧಾರಣೆಯ ಒಂದು ಮಾಧ್ಯಮವೆನಿಸಿರುವಂತಿದೆ.

೧೯೮೮ ರಲ್ಲಿ ಪ್ರಕಟಗೊಂಡಿರುವ 'ಬದುಕಿನ ಸುತ್ತ' ಎಂಬುದು ದೇಶಾಂಶರ ಮೂವತ್ತೈದು ಕವನಗಳನ್ನೊಳಗೊಂಡಿರುವ ಪ್ರಥಮ ಕವನ ಸಂಕಲನವಾಗಿದೆ. ಇದರಲ್ಲಿ ಹಲವು ಕವನಗಳು, ನನ್ನ ಬದುಕಿನ ಸುತ್ತ ಆಗಾಗ ತಮ್ಮ ಬೆಳಗನ್ನು ಬೀರಿ, ಅಂತರಾಳದಲ್ಲಿ ಮುದ್ರೆಯೊತ್ತಿ ಅಚ್ಚಳಿಯದೇ ಉಳಿದ ಚಿತ್ರಗಳು, ಅವು ನನ್ನ ನೋವು–ನಲಿವುಗಳ ಪ್ರತಿಕೃತಿಗಳು. ನಾಡು–ನುಡಿ, ದೇಶ, ತಾಯಿ, ಹೆಂಡತಿ, ಹೆಣ್ಣು, ದುರ್ಬಲ, ದಲಿತ, ಜೀತದಾಳು, ಅಬೋಧ, ಕಾರ್ಮಿಕ ರೈತ ಮೊದಲಾದ ತತ್ವಗಳು, ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ವೈಚಾರಿಕ ಒತ್ತಡಕ್ಕೆ ಸಿಕ್ಕು ವಿಲಿವಿಲಿ ಒದ್ದಾಡುವುದನ್ನು ಇದರಲ್ಲಿವೆ. ಕಂಡುಂಡು ತಾಳಿಕೊಳ್ಳದೆ ಬಹಿರಂಗಕ್ಕಿಳಿದ ಕವನಗಳು ಇದರಲ್ಲಿವೆ. ಹೃದಯ ಮಿಡಿದಂತೆ ಅವು ನುಡಿಗೊಂಡಿವೆ[1] ಎಂದು ಕವಿಯೇ ಹೇಳಿಕೊಂಡಿರುವುದು ಗಮನಾರ್ಹ ಸಂಗತಿಯಾಗಿದೆ.

ಕನ್ನಡ ಪ್ರಸಿದ್ಧ ಕವಿಗಳಾದ ಕುವೆಂಪು ಬೇಂದ್ರೆಯವರ ಪ್ರಭಾವಕ್ಕೊಳಗಾಗಿರುವ ದೇಶಾಂಶರು ತಮ್ಮ ಸೃಜನಶೀಲತೆಯನ್ನು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಹರಿಬಿಟ್ಟಿದ್ದರೂ ಸಹ ಅದು ಪ್ರಧಾನವಾಗಿ ಕಾಣುವುದು ಕಾವ್ಯದಲ್ಲಿಯೇ. ಕಾವ್ಯ ರಚನೆಯಲ್ಲಿಯ ಕವಿಯ ಮಹತ್ವವು ಅವರಿಗೆ ಆಶಯಕ್ಕೆ ತಕ್ಕಂತೆ ಕಾವ್ಯಾಭಿವ್ಯಕ್ತಿಯ ಮಾಧ್ಯಮವೂ ಆಗಿರುವುದು ಗಮನಾರ್ಹ ಅಂಶ.

ಹಸಿದ ಹೊಟ್ಟೆಯನು
ಹುರಿ ಹೊಸೆದು ಕೊಂಡು
ಹೊಲದಲ್ಲಿ ದುಡಿವ
ಮಾಸಿ ಕಿಮುಟಾದ
ಹರಕು ಸೀರೆಯ
ನಾರಿಯರ ಕಂಡು
ಕವಿಗೆ ಪ್ರೇರಣೆ ಬಂದು – – ಸೃಷ್ಟಿಕರ್ತನ ಚಿತ್ತಾರವೆಂದನು

ಗೀಚಿ ಗೀಚಿ ಪ್ರತಿಸೃಷ್ಟಿ ಮಾಡಿದನು ಅದರಲ್ಲಿ ತನ್ನ ತಾ ಮರೆತನು ಎಂಬಲ್ಲಿಯ ಕವನದ ಆಶಯ ಕವಿತ್ವದ ಪ್ರೇರಣೆ, ಧೋರಣೆಗಳ ರಾಚನಿಕ ವಿನ್ಯಾಸವನ್ನೆಲ್ಲ ಕಾಣಬಹುದು. ದುಡಿಯುವ ಮಹಿಳೆಯರ ಸ್ಥಿತಿ ಗತಿಗಳನ್ನು

---

[1] ದೇಶಾಂಶ ಹುಡುಗಿ–ಬದುಕಿನ ಸುತ್ತ–೧೯೮೮ ನನ್ನ ಮಾತು – ಪು ೯.

ವಾಸ್ತವಗೊಳಿಸಿರುವ ಈ ಕವನ ಕವಿಯ ಸಾಮಾಜಿಕ ಕಾಳಜಿಯನ್ನು ಎದೆ ತೆರೆದು ತೋರಿಸುತ್ತದೆ. ಕವಿಯ ಕರ್ಮವೇ ಕಾವ್ಯವಾಗಿರುವುದರಿಂದ ಅದೊಂದು ಕವಿಯ ಸಾಧನೆಯಾಗಿ ಹೊರ ಹೊಮ್ಮಬೇಕು. ಶಬ್ದಗಳ ಸಂತೆಯಾಗಲಿ, ಕೇವಲ ಕಲ್ಪನೆಯ ಮಾತುಗಳಷ್ಟೇ ಆಗಲಿ ಕಾವ್ಯವಾಗುವುದಿಲ್ಲ. ಕಾವ್ಯದ ಮೂಲ ಲೋಕಾನುಭವದ ಚಲವು ಆ ಸೌಂದರ್ಯದ ಸಂವೇದನೆಯೇ ಸಾಕಾರಗೊಂಡು ಕಾವ್ಯವಾಗಬೇಕೆಂಬುದು ವಿದ್ವಾಂಸರ ಆಶೆ. ಯಾವುದೇ ಒಂದು ಕಾವ್ಯದ ಸತ್ವ ಆಯಾ ಕವಿಯ ಪರಿಸರ ಸಂವೇದನೆಯ ಮೇಲೆ ಅವಲಂಬಿತವಾಗಿರುತ್ತದೆ. ಈ ದೃಷ್ಟಿಯಲ್ಲಿ ದೇಶಾಂಶರರ ಚೊಚ್ಚಲು ಕವನ ಸಂಕಲನದಲ್ಲಿಯೇ ಈ ಸಂವೇದನೆಯ ತೀವ್ರತೆಯನ್ನು ಕಾಣಬಹುದಾಗಿದೆ. ಅವರಿಗೆ ಕುಟುಂಬ ವ್ಯವಸ್ಥೆಯ ಸಂಕೇತವಾಗಿ ಹಡೆದು ಸಾಕಿದ ತಾಯಿ, ಸತಿ, ಮಣ್ಣಿನ ಮಕ್ಕಳು, ಬೇಶರ್ಮಿ, ಹರಿತ ದನಿ, ಒಡತಿ, ಒಕ್ಕಲಗಿತಿ ತಿಳಿದಾದ ಬಡವನ ಪೆಟ್ಟು. ಇಪ್ಪಿಟ್, ಮಳೆ ಮತ್ತು ನಮ್ಮೂರಿನಂತರ ಕವನಗಳಲ್ಲಿಯ ಪರಿಸರವು ದಟ್ಟವಾದ ಅನುಭವವನ್ನು ನೀಡಿದೆ. ಮೊದ ಮೊದಲು ಭಕ್ತಿ ಮತ್ತು ನೀತಿ ಪ್ರಧಾನ್ಮತೆಗೆ ಮಣಿದಿರುವ ಈ ಕೆಳಗಿನ ಕವನಗಳಿವೆ. ಭಾಲ್ಕಿಯ ಚನ್ನಬಸವ ಪಟ್ಟದ್ದೇವರ ಕುರಿತ.

ಕ್ರಾಂತಿ ಕಹಳೆಯ ನೂದಿ
ಶರಣ ಮಾರ್ಗವ ತೋರಿ
ದಲಿತ ಜನುಮದಲಿ
ಜ್ಞಾನ ಜ್ಯೋತಿಯನುರಿಸಿ
ಗಡಿನಾಡ ಜನರೆದೆಯ
ಗಂಡು ಗನ್ನಡವಾಗಿ
ಅನುಭವ ಮಂಟಪದ
ಅಡಿಗಲ್ಲು ನೀನಾಗಿ[2]

ಎಂದು ಅವರ ಕಾರ್ಯ ವೈಖರಿಯನ್ನು ಕಂಡು ಭಕ್ತಿಪೂರ್ವಕವಾಗಿ ತಲೆಬಾಗುತ್ತಾರೆ. ಹಾಗೆಯೇ ತನ್ನೂರಿನ ವರ್ಣನೆಯಲ್ಲಿ ಕವಿಗೆ ಭಕ್ತಿಯೇ ಸ್ಥಾಯಿಯಾಗಿ ನಿಂತಿರುವುದನ್ನು ಗುರುತಿಸಬಹುದು.

'ನ್ಯಾಯಕ್ಕೆ ಪಂಚಾಯ್ತಿ! ಸಾಲಕ್ಕೆ ಸೊಸೈಟಿ
ರೋಗ ಕಳಿಯಾಕ ದವಾಖಾನಿ। ನಿನ್ನೂರು
ಭಕ್ತಿಯ ಬೀಜ ಗುರುಮನಿ–[3]

---

[2] ದೇಶಾಂಶ – ಬದುಕಿನ ಸುತ್ತ – ಚೆನ್ನಬಸವ ಪು–೧೪.

3. ದೇಶಾಂಶ – ಹಾಲು ಜೇನಿನ ಹೊಳೆ – ಪು–೨.

ಇದರಂತೆ ಕರನಾಡ ಚೆಲವನ್ನು ಎಲ್ಲದರಲ್ಲಿ ಕಾಣುವ 'ದೇಶಾಂಶ'ರು – ಕನ್ನಡದನಿ ಇದೆ ಕಲ್ಲೊಳು ಇಲ್ಲಿ. ಕಲ್ಲು ಬೆಣ್ಣೆಯಲಿ ಕರಗಿದೆ ಇಲ್ಲಿ ಬೆಳ್ಗೊಳದಲ್ಲಿ. ಹಳೆಬೀಡಲ್ಲಿ ಜಲಸಂಗದಲಿ, ಸೇಡಮ್‌ದಲ್ಲಿ ಎನ್ನುತ್ತ ಕಣ್ತೆರೆದು ನೋಡಲು ಕರೆಯುತ್ತಿರುವಲ್ಲಿಯ ಕಾವ್ಯದ ಆಯಶವು ಪ್ರತ್ಯಕ್ಷವಾಗಿ ಕೈಮಾಡಿ ತೋರುತ್ತದೆ. ಯಾವುದೇ ಕವಿಗೆ ತನ್ನದೆನ್ನುವ ಒಂದು ವಿಶಿಷ್ಟ ಮನೋಧರ್ಮವು ಇರುವಂತೆ, ಜೊತೆಗೆ ಬೆಳೆದು ಬಂದ ಸಾಂಸ್ಕೃತಿಕ ಸ್ಥಿತ್ಯಂತರಗಳು ಅವನ ಪ್ರಜ್ಞಾವಲಯದಲ್ಲಿ ಸ್ಥಾನಪಡೆದಿರುತ್ತದೆ. ಅವುಗಳಲ್ಲಿ ಒಂದನ್ನು ದೇಶಾಂಶರ 'ಹಡೆದು ಸಾಕಿದ ತಾಯಿ' ಕವನ ಅಭಿವ್ಯಕ್ತಿಸುವ ರೀತಿ ಹೀಗಿದೆ – ತಾನು ಹೊತ್ತು ಹೆತ್ತ ಮಗುವನ್ನು ನಿಜ ಜೀವನದಲ್ಲಿ ನಿಲ್ಲಿಸಿ ಆನಂದ ಪಡುವ ಅವಳು.

'ಮುಪ್ಪಡರಿ ಮುದಿಯಾಗಿ, ಕೈಕಾಲ ಬಲ ಹೋಗಿ
ನಡಬಾಗಿ ಬಿಲ್ಲಾಗಿ, ಮೂಲೆ ಮುದ್ದೆಯು ಆಗಿ
ಬಕ್ಕ ಬಾಯಿಲಿ ಮೊಮ್ಮಗುವ ಮುದ್ದಿಸುತ
ಸೊಸೆ ಕೊಟ್ಟುದ ತಿನುತ, ಕಣ್ಣೀರ ಕುಡಿಯುತ್ತ
ಮಗನ ಬೈಗಳ ತಿನುತ, ಹೊಟ್ಟೆತುಂಬಿತೆನ್ನುತ
ಕೂಳಿನಾಸೆಗೆ ಬಿದ್ದ ನಾಯಿ ಹಡೆದು ಸಾಕಿದ ತಾಯಿ'.

ಆಗಿ ನಿಲ್ಲುವುದನ್ನು ಚಿತ್ರೀಕರಿಸಿದಂತೆ ಮುಂದಿಡುತ್ತಾರೆ. ಇದು ಇಂದಿನ ನಮ್ಮ ಕುಟುಂಬ ವ್ಯವಸ್ಥೆಯಲ್ಲಿನ ಒಂದು ವಾಸ್ತವ ಸತ್ಯವನ್ನು ನಮ್ಮ ಮುಂದೆ ಅಭಿವ್ಯಕ್ತಪಡಿಸಿ, (ಪ್ರಜ್ಞಾವಂತರನ್ನು) ಆಲೋಚನೆಗೆ ಹಚ್ಚುತ್ತದೆ. ಅಂತೆಯೋ "ಕಾಶಿನಾಥ ಗೋಕುಳೆಯವರು ಸಮಾಜದ ಓರೆ ಕೋರೆಗಳನ್ನು ತಿದ್ದುವ, ಗಹನವಾಗಿ ಚಿಂತಿಸುವ ಈ ರೀತಿಯ ಕವನಗಳು ಬಹಳ ಮಾರ್ಮಿಕವಾಗಿ ಮೂಡಿಬಂದಿವೆ. ಬದುಕಿನ ಸುತ್ತ ಹೆಣೆದ ಹಡೆದು ಸಾಕಿದ ತಾಯಿಯನ್ನೊಳಗೊಂಡ ಅನೇಕ ಕವನಗಳು ಎಡೆ ಬಿಡದೇ ಓದಿಸಿಕೊಂಡು ಹೋಗುತ್ತವೆ ಎಂದಿದ್ದಾರೆ[4]".

ತಮ್ಮ ಕವನಗಳನ್ನೋಡಿ ಯಾರೂ ಮೆಚ್ಚಲಿ ಅಥವಾ ಬಿಡಲಿ ತಮ್ಮ ವೈಚಾರಿಕ ನಿಲುವನ್ನು ಅಭಿವ್ಯಕ್ತಗೊಳಿಸುವ ಕವಿಯು ತಮ್ಮ 'ಬದುಕಿನ ಸುತ್ತ'ಲಿನ ಹಲವಾರು ಸಂದರ್ಭಗಳನ್ನು ವ್ಯಕ್ತಗೊಳಿಸುವಾಗ ಸ್ತ್ರೀ ಬದುಕಿನ ಸಬಲತೆ, ಸ್ತ್ರೀ ಸಮಾಜದ ಅಂತರಂಗ ಹಾಗೂ ಸ್ತ್ರೀಯರ ಅಭಿವೃದ್ಧಿಗಾಗಿ ಕಾವ್ಯವನ್ನು ಮಾಧ್ಯಮವಾಗಿ ಬಳಸಿಕೊಂಡಿದ್ದಾರೆ. ಇವರ 'ಸತಿ' ಎಂಬ ಕವನ ಸ್ತ್ರೀಯರಿಗೆ ಬಲ

---

[4] ಬದುಕಿನ ಸುತ್ತ ಕುರಿತು–೧೯೮೮ – ಪು ೪೮.

ಪ್ರದರ್ಶಿಸಲು ಸೂಚಿಸುವ ಕವನ. ಹಿಂದಿನ 'ಸತಿ' ಪದ್ಧತಿಯ ಕ್ರೌರ್ಯತನವನ್ನು ಟೀಕಿಸುವ ಇದು ಹೆಣ್ಣಿದೆಯ ದುಃಖವನ್ನು ದೂರಮಾಡಲಿ, ಗಂಡಿನ ಕ್ರೌರ್ಯಕ್ಕೆ ಕೊನೆ ಹಾಡಲು ನಾರಿಯರಿಗೆ ಉರಿಯುವ ಕೆಂಡವಾಗಬೇಕೆಂದು ಕವಿ ಕರೆನೀಡುತ್ತಾರೆ. ಅಲ್ಲದೇ ನಾರಿಯರನ್ನು ಸುಡುವವರ ಎದೆ ಮೆಟ್ಟಿ, ಮಹಾಕಾಳಿಯಾಗಿ ಅಂಥವರ ರಕ್ತ ಕುಡಿಯಬೇಕೆನ್ನುತ್ತಾರೆ. ಯಾಕೆಂದರೆ ಇಂದಿನ ಸಮಾಜ.

ಬಾಗಿದರೆ ಒದೆಯುವರು
ಒದೆದರಡಿಗೆರಗುವರು ಅಂತೆಯೊ
ಒದೆ ಕೀಳು ಕಂಗಳನು
ಕಣ್ಣೆತ್ತದಿರಲಿ--[5] ಎಂದೂ ಹೇಳುತ್ತಾರೆ.

ಕಲಿಯದ ಹೆಣ್ಣು ಮಕ್ಕಳನ್ನು ಕುರಿತು ಅಕ್ಕತಂಗಿ ಅವ್ವಗಳಿರಾ, ಬನ್ನಿ.

ಅಕ್ಷರ ಕಲಿಯಿರಿ, ಎಂದು ಆಹ್ವಾನಿಸುವ ಕವಿ ನಿರಕ್ಷರಿಗಳ ಸಾಕ್ಷರಕ್ಕಾಗಿ ಕರೆದು – 'ಓದಲ್ಲೋರು ಹುಟ್ಟಬಂದ್ರೂ ಸತ್ತಾಂಗ್ರೆವ್ವ' ಎಂದು ತಿಳಿಹೇಳುತ್ತಾನೆ. ಅವರು ಓದಬೇಕು ಬರೆಯಬೇಕು ಎಂಬ ಹಂಬಲದಿಂದ ಅವರಿಗೆ ನಾನಾ ರೀತಿಯಾಗಿ ತಿಳಿಹೇಳುವ 'ಕಲಿಯೀರೆವ್ವ' ಎಂಬ ಕವನ ಹೆಚ್ಚು ವಾಚ್ಯವಾಗಿದೆ ಎನಿಸುತ್ತಿದ್ದರೂ, ಅದರಲ್ಲಿರುವ ಸಾಮಾಜಿಕ ಕಳಕಳಿ ಹೆಣ್ಣು ಮಕ್ಕಳಿಗೆ ವಿದ್ಯೆ ಅತಿ ಮುಖ್ಯ ಎಂಬ ಹೇಳಿಕೆಗಳು ಗಮನ ಸೆಳೆಯುತ್ತವೆ.

'ಅರಿವಿಗಾಗಿ ಕಲಿಯಬೇಕು, ಅರಿವಿಟ್ಟು ದುಡಿಯಬೇಕು
ಎಚ್ಚರಿಟ್ಟು ನಡಿಯೀರಕ್ಕಾ ತಂಗೇರವ್ವ
ರಾತ್ರಿ ಸಾಲೀಗ್ಬಂದ್ ನೀವು ಕಲಿಯೀರೆವ್ವಾ[6]'

ಎಂದು ಕೈಮುಗಿದು ರಾತ್ರಿ ಸಾಲಿಗೆ ಕರೆಯುವ ಕವಿಯು ಸಾಕ್ಷರತಾ ಆಂದೋಲನದೊಳಗ ವಯಸ್ಕರ ಶಿಕ್ಷಣ ಯೋಜನಾಧಿಕಾರಿಯಾಗಿ ಸೇವೆ ಸಲ್ಲಿಸಿದರು. ಇವರು ಅಧಿಕಾರಿಯಾಗಿ ಈ ಕವನ ಬರದವರಲ್ಲ, ನಿಜವಾಗಿಯೂ 'ಸಾಕ್ಷರತೆಗಾಗಿ' ಹಗಲಿರುಳು ದುಡಿದವರು. ಅವರ ಹೃದಯ ಸ್ತ್ರೀಯರ ನೋವು–ನಲಿವಿಗಾಗಿ ಮಿಡಿದಿರುವುದನ್ನು ಅರಿಯಬಹುದಾಗಿದೆ.

---

5 ಬದುಕಿನ ಸುತ್ತ – ಕಲಿಯೇರೆವ್ವ – ಪು ೯.

6 ಬದುಕಿನ ಸುತ್ತ – ಕಲಿಯೇರೆವ್ವ – ಪು ೪೩.

ಸಾಮಾನ್ಯವಾಗಿ ನಮ್ಮ ಸಮಾಜದಲ್ಲಿ ವಿದ್ಯೆ ಕಲಿಯದ ಹೆಣ್ಣು ಮಕ್ಕಳು ಮನೆಮುಂದಿನ ಕಟ್ಟೆಯ ಮೇಲೆ ಕುಳಿತು ಊರ ಸುದ್ದಿ ಮಾತಾಡುವುದರಲ್ಲಿ ವ್ಯರ್ಥ ಸಮಯ ಕಳೆಯುತ್ತಾರೆ. ವಿನಃ ಅಕ್ಷರ ಕಲಿಯಬೇಕೆಂಬ ಆಸಕ್ತಿ ಅವರಲ್ಲಿರುವುದಿಲ್ಲ. ಒಬ್ಬ ರಾಣಿ ಚನ್ನಮ್ಮಾ, ಝಾನ್ಸಿರಾಣಿ, ಇಂದಿರಾ ಗಾಂಧಿ, ಆಗಿ ಹೋದ ಮಾತ್ರಕ್ಕೆ ಹೆಣ್ಣು ಕುಲದ ಉದ್ಧಾರವಾಯಿತೆಂದು ಅರ್ಥವಲ್ಲ, ಪ್ರತಿಯೊಬ್ಬ ಮಹಿಳೆ ಅಕ್ಷರ ಕಲಿತಾಗ ಮಾತ್ರ ಸ್ತ್ರೀ ಕುಲದ ಉದ್ಧಾರವಾಗಲು ಸಾಧ್ಯ. ಇಲ್ಲವಾದರೆ ಮನು ಮಹಾಶಯನ ಶಾಸನದಂತೆ ಹೆಣ್ಣು ಖೊಟ್ಟಿ ಆಶ್ರಮಗಳಲ್ಲಿ ಬದುಕಬೇಕಾಗುತ್ತದೆ. ಸಲಹುವ ನೆಪದಲ್ಲಿ ದಾಸಿ ಜೀವನ ಕೊಡುವ, ಸತ್ತ ಗಂಡನ ಕೂಡ ಚಿತೆಗೇರುವಂತೆ ಮಾಡುವುದನ್ನು ತಪ್ಪಿಸಿಕೊಳ್ಳಲು, ಅಕ್ಷರ ಕಲಿಯುವ ಮೂಲಕ ಉದ್ಧಾರ ಮಾಡಿಕೊಳ್ಳಲು ಎಚ್ಚರಿಸುತ್ತಾರೆ ಕವಿ. ಇವರು ಕವನಗಳ ಮೂಲಕ ಹೀಗೆ ಹೇಳಿ ಹೋದವರಲ್ಲ. ಸ್ವತಃ ಹಳ್ಳಿ ಹಳ್ಳಿಗೆ ಸಂಚರಿಸಿ, ಅಲ್ಲಿರುವ ಹೆಣ್ಣು ಮಕ್ಕಳನ್ನು ಹಿರಿಯರಾದ ಇವರು ಅಕ್ಕ, ಅವ್ವಾ, ತಂಗಿ ಎಂದು ಆತ್ಮೀಯವಾಗಿ ಕರೆದು ಅವರಿಗೆ ಅಕ್ಷರ ಕಲಿಸಲು ಪ್ರಯತ್ನಿಸಿದರು.

'ಓದುವವರಿಗೆ ಯಾವುದೂ ಕೇಡಿಲ್ಲವಾಗಿ ತಾವು ಒಲಿದಂತೆ ಹಾಡುವ ದೇಶಾಂಶ' ಹುಡುಗಿಯವರು ಹೃದಯವಂತರು, ತಾವು ಕಂಡುಂಡ ಚಿತ್ರಗಳನ್ನು ಮುಚ್ಚುಮರೆಯಿಲ್ಲದೆ ಬಿಚ್ಚಿ ಬಯಲಿಗಿಡುವ ರೀತಿ ಆಕರ್ಷಣೀಯವಾದುದು[7] ಎಂಬ ಮಾತು ಒಪ್ಪುವಂತಹದ್ದು.

ಯಾಕೆಂದರೆ ಮಾನವ ಬದುಕಿನ ಸುತ್ತ ಚಿಂತನೆಗೈದಿರುವ ಅವರ ಈ ಸಂಕಲದಲ್ಲಿ ವಾಸ್ತವಿಕ ವಿಚಾರಗಳ ಅಭಿವ್ಯಕ್ತಿಯಿದೆ. ಇಂದು ಒಬ್ಬರನ್ನು ನೋಡಿ ಇನ್ನೊಬ್ಬರೂ ಅವರಂತಾಗಲು ಪ್ರಯತ್ನಿಸುವ ರೀತಿ ಇಲ್ಲಿ ವಿಡಂಬನಾತ್ಮಕವಾಗಿ ಹೊರಮ್ಮಿರುವುದನ್ನು ಕಾಣಬಹುದು.

"ಕ್ಲಬ್ಬಿನಲ್ಲಿಯ ಕಾಮಿನಿಯರು
ಕಂಡವರ ತೆಕ್ಕೆಯಲಿ
ಕುಣಿಯುವುದನ್ನು ಕಂಡ
ದೂರದಲ್ಲಿ ನಿಂತ ಸೀತೆಯೊಬ್ಬಳು
ನಾನೂ ಅವಂತಾಗಲೇ...... ಎಂದಳು[8]"

---

[7] ಸೋಮನಾಥ ಯಾಳವಾರ – ಸೃಜನಶೀಲ ವ್ಯಕ್ತಿ ದೇಶಾಂಶರು–ಚೇತನ ಶಿಲ್ಪಿ ಪು ೮೪.

[8] ಬದುಕಿನ ಸುತ್ತ – ಅವರಂತಾಗಲೀ – ೧೪.

ಎಂಬಲ್ಲಿಯ ಕವನದ ಆಶಯ ಇಂದಿನ ಸ್ಥಿತಿಯನ್ನು ಎತ್ತಿ ತೋರಿಸುತ್ತದೆ. ಭಾರತದ ಜನಸಂಖ್ಯೆ ಮಿತಿಮೀರಿ ಬೆಳೆಯುವುದು ಅಪಾಯಕಾರಿ ಸಂಗತಿ. ಅದನ್ನು ನಿಯಂತ್ರಿಸದಿದ್ದರೆ ಈ ದೇಶದಲ್ಲಿ ಬೇಜವಾಬ್ದಾರಿತನ, ನಿರುದ್ಯೋಗ ಹಾಗೂ ಬಡತನಗಳು ಗರಿಷ್ಠ ಮಟ್ಟದಲ್ಲಿ ಬೆಳೆದು ನಿಲ್ಲುತ್ತವೆ ಎಂಬ ಚಿಂತೆ ಕವಿಯನ್ನು ಕಾಡಿದೆ. ಅದನ್ನು ಬೀದರ ಜಿಲ್ಲೆಯ ಹೊಲ ಬದುಗಳಲ್ಲಿ, ನಿರೀನಂಶವಿರುವ ಜಾಗದಲ್ಲಿ ಬೆಳೆಯುವ ಕಳೆ 'ಬೇಶರ್ಮಿ'ಗೆ ಹೋಲಿಸಿರುವುದು ಒಂದು ಸೊಗಸಾದ ಅಭಿವ್ಯಕ್ತಿಯಾಗಿದೆ.

'ಬುಡ, ತುದಿ, ಟೋಂಗಿ
ಬೇಕಾಗಿದ ಕಡೀಗಿ
ಕತ್ತರಿಸಿ ನೆಲ ಕಾಣಿಸಿದರ ಸಾಕು
ಮಳೆಗಾಲ ಬ್ಯಾಸ್ಗೀ ಅಂಬಾ ಅರಿವಿಲ್ದಂಗ
ಕರುಳಬಳ್ಳೀ ಚಾಚೀ
ಬೆಳಿಗೆ ಜಾಗಿಲ್ದಂಗ್ ಮಾಡ್ಬಿದ್ದಾದ'

ಭಾರತದ ಎಪ್ಪತ್ತು ಕೋಟಿ ಜನ
ಬೆಳೆಧಂಗ ಬೇಶರಮ್ಮಾಗಿ
ಸಿಕ್ಕಾಬಟ್ಟೆ ಬೆಳ್ದು ಕಾಡ್ತೀರ್ತದ’?

ಜನರ ಆಡು ನುಡಿಯ ಪ್ರತೀಕವೊಂದನ್ನು ದೇಶದ ಒಂದು ಸಮಸ್ಯೆಯನ್ನು ಬಿಡಿಸಲು ಬಳಸಿಕೊಂಡಿರು ರೀತಿ ನಿಜಕ್ಕೂ ಮೆಚ್ಚುವಂತಹದು. ಹಾಗೆಯೇ ದೇಶಾಂಶರು ಯಾವುದೇ ವಿಷಯವನ್ನು ಕುರಿತು ಹೇಳುತ್ತಿದ್ದರೂ ಅವೆರದು ನೇರನುಡಿ.

ಹೊಲೆಯ ಮಾದಿಗ ಥೋರ ಮಚ್ಚಿಗ
ಇರುವುದೊಂದೆ ಊರು;
ಹಾರ್ವ ಬಣಜಿಗ ಕುರುಬ ಕಬ್ಬಿಗ
ಕುಡಿವುದೊಂದೇ ನೀರು[೧೦].

---

9 ಬದುಕಿನ ಸುತ್ತ – ಬೇಶರ್ಮಿ – ಪು ೧೫.

10 ಬದುಕಿನ ಸುತ್ತ– ನಾವೆಲ್ಲ ಬಂದು – ಪು ೨೧.

ಇಂಥ ಕವನಗಳಲ್ಲಿಯ ವಸ್ತು ವಿವೇಚನೆಯು ತುಂಬಾ ನೇರವಾಗಿರುವುದನ್ನು ಕಾಣಬಹುದು. ಬದುಕಿನ ಸುತ್ತಲಿನ ನೈಜ ಜೀವನದ ರೀತಿ ನೀತಿಗಳನ್ನು ಜಾನಪದ ಗತ್ತಿನಲ್ಲಿ ಸೊಗಸಾಗಿ ಬಿಂಬಿಸುವ ರೀತಿ ತುಂಬಾ ಮೆಚ್ಚುಗೆಯಾಗುತ್ತದೆ.

"ಕೈಯಾಗ ರೊಟ್ಟಿ
ಮ್ಯಾಲೀಟ್ ಪಲ್ಲ್ಯಾ
ಕುಡ್ತಾಳಲ್ಲೇ ಊಟ
ಕೊಡ್ತಾಳ ಉಲ್ಲಾಸ ನೋಡ್ತಾ[೧೧]"

ಎಂಬಂತಹ ಹಲವು ಕವನಗಳಲ್ಲಿ ದೇಶಾಂಶರು ಸಹಜವಾದ ಹಾಗೂ ಸರಳವಾದ ಬೀದರ ಭಾಷೆಯನ್ನು ಬಳಸಿ ಓದುಗರಿಗೆ ಸುಲಭ ಗ್ರಾಹ್ಯವಾಗುವಂತೆ ವಾಸ್ತವಿಕ ನಿರೂಪಣೆಯೊಂದಿಗೆ ಚೆಲುವಾಗಿ ಚಿತ್ರಿಸಿದ್ದನ್ನು ಗುರುತಿಸಬಹುದು. ನಾಡು–ನುಡಿ ಹಾಗೂ ಮಾನವೀಯ ಮೌಲ್ಯದ ಕಡೆಗೆ ಗಮನ ಹರಿಸುವ ಹಾಗೂ ಅದನ್ನು ಅಷ್ಟೇ ಪರಿಣಾಮಕಾರಿಯಾಗಿ ಹೇಳುವ.

'ಸರ್ವಧರ್ಮಗಳ ತೌರಿಹುದಿಲ್ಲಿ
ಧರ್ಮ ಸಾಮ್ಯತೆಯ ಭಾವವು ಇಲ್ಲಿ
ದಾಸವರ್ಯರ ಧಾಮವು ಇಲ್ಲಿ
ಜ್ಞಾನವ ಬೀರಿದ ಗುರುಗಳು ಇಲ್ಲಿ
ಕಾಯಕ ತತ್ವವ ಬೀರಿದ ಶರಣರ ನೋಡಲೋಮ್ಮೆ ಬನ್ನಿ [೧೨]'

'ಒಡ ಹುಟ್ಟಿದವರಿಗೆ ಮೃತ್ಯುವಾದಾಗ
ಕೋವಿ ಬೆಂಕಿಗೆ ಕಂಡ ಕಂಡವರು ಅಳುವಾಗ
ಬಂಗಾರ ಚೂರಿ ಕಂದಮ್ಮಗಳ
ಮಡಿಲಲ್ಲಿಟ್ಟು ಕೊಳ್ಳಲಾಗದೆ
ಮಂದಿಗೆ ತೋರಿಸಲಾಗದೆ
ಒಡಲ ನೋವ ನುಡಿಗೊಳಿಸಲಾಗದೆ
ಮೌನವಾಗಿರುವೆ[೧೩]'

---

[11] ಬದುಕಿನ ಸುತ್ತ– ಮಣ್ಣಿನ ಮಕ್ಕಳು – ಪು ೧೩.

[12] ಬದುಕಿನ ಸುತ್ತ– ಕರುನಾಡ ಚೆಲವು – ಪು ೪.

[13] ಬದುಕಿನ ಸುತ್ತ– ಭಾರತಾಂಬೆಗೆ – ಪು ೫.

ಎಂಬಂತಹ ಕವನಗಳಲ್ಲಿ ಕಾಣಬಹುದಾಗಿದೆ. ನೇರವಾಗಿ ಹೇಳುವ ಕುಶಲತೆ, ಓದಿಸಿಕೊಂಡು ಹೋಗುವ ಸಹಜ ಸಂಯೋಜಕತೆ, ವೈಚಾರಿಕ ಚಿಂತನಪ್ರೀಯತೆ, ಭಕ್ತಿಭಾವದ ಅನ್ಯೋನ್ಯತೆ, ಅನುಕಂಪದ ಹೃದಯವಂತಿಕೆ ದೇಶಾಂಶರ ಕವಿತೆಗಳಲ್ಲಿ ಮನಮುಟ್ಟುವಂತೆ ಮೂಡಿ ಬಂದಿವೆ[14].

ತಮ್ಮದೇ ಆದ ಸ್ವಂತಿಕೆ ಎನ್ನುವುದು ದೇಶಾಂಶ ಹುಡಗಿಯವರ ಬದುಕಿನ ಜೀವಂತಿಕೆಯ ಸೆಲೆಯಾಗಿರುವಂತೆ, ಅದು ಅವರ ಕವಿತೆಗಳ ಆಶಯದ ನೆಲೆಯೂ ಆಗಿದೆ. ತಮ್ಮದೆ ಆದ ಕಾವ್ಯ ದೃಷ್ಟಿಯ ಧೋರಣೆ, ಹಾಗೂ ಉದ್ದೇಶಗಳ ಮಿತಿಯಲ್ಲಿ ತಮ್ಮ ಸಂವೇದನೆಗಳಿಗೆ ಕಾರಣಗಳಾದ ಅನುಭವಗಳು, ಅನುಭವಕ್ಕೆ ಸಿಲುಕಿದ ಪರಿಸರ, ಅವುಗಳ ಭಾಷಾಭಿವ್ಯಕ್ತಿಯ ರೀತಿ–ನೀತಿಗಳು ದೇಶಾಂಶರ ಕಾವ್ಯದ ದಾರಿಯನ್ನು ನಿರ್ಮಿಸಿಕೊಂಡು ಬಂದಿವೆ ಎಂಬುದನ್ನು ಅವರ ಕಾವ್ಯಗಳ ಅಧ್ಯಯನದಲ್ಲಿ ಕಂಡುಕೊಳ್ಳಬಹುದಾಗಿದೆ. ಬದುಕಿನ ನಿರಂತರ ಅನ್ವೇಷಣೆ ಇವರ ಕವನಗಳ ಒಟ್ಟು ವಸ್ತುವಾಗಿದ್ದು, ಅದನ್ನು ತಮ್ಮದೇ ಆದ ಶೈಲಿಯಲ್ಲಿ ಹೇಳಿರುವ ಪರಿ ಮೆಚ್ಚುವಂತಿದೆ. ಅವರ ನಮ್ಮವರು.

ಕೊಡಲಿ ಕಾವಾದವರು
ಜೀವಂತ ಹೆಣಗಳ ಹರಿದುಂಬ ರಣಹದ್ದುಗಳು
ಕಛೇರಿ ಹೊಲಸೆಬ್ಬಿಸುವ ಕಾಗೆಗಳು
ಅಜ್ಞಾನ ಕತ್ತಲಿನ ಗೂಬೆಗಳು
ಸರ್ವಗುಣ ಸಂಪನ್ನರು
ಅವಗುಣ ಪರಿಪೂರ್ಣರು
ಇವರೇ ನಮ್ಮ ಹಿತಚಿಂತಕರು
ಭಾವೀ ನಾಗರಿಕರ ನಿರ್ಮಾತೃಗಳು.

ಎಂಬ ಕವನ ಇಂದಿನ ರಾಜಕಾರಣಗಳನ್ನು ಕುರಿತದ್ದಾಗಿದೆ. ಅವರ ಚರಿತ್ರೆಯನ್ನು ಇದ್ದಂತೆ ಹೇಳುವ ಈ ಕವಿಯು ಬಹುಮಟ್ಟಿಗೆ ಸರ್ವಜ್ಞನನ್ನು ಹೋಲುತ್ತಾರೆ. ವ್ಯಂಗ್ಯ ವಿಡಂಬನೆಗಳೇ ಈ ಕವನದ ಸ್ಥಾಯಿ ಭಾವಗಳು ಈ ಕವನದ ಹಿಂದೆ ಸಾತ್ವಿಕ ರೋಷ, ನೈತಿಕ ಚಿಂತನೆ, ಪ್ರಾಮಾಣೀಕ ಅನುಕಂಪವಿದೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಜೀವನದ ಸಮೃದ್ಧ ಅನುಭವವಿದೆ. ಸುತ್ತ ಮುತ್ತಲಿನ

---

[14] ಗುರುಸಿದ್ದಪ್ಪ ಸೋಮಶೆಟ್ಟಿ – ಬದುಕಿನ ಸುತ್ತ ಕುರಿತ – ಪು ೪೯.

ಜೀವನವನ್ನು ನಿರೀಕ್ಷಿಸುವ, ನಿರೀಕ್ಷಿಸಿದ್ದನ್ನು ನೇರವಾದ ಮಾತಿನಲ್ಲಿ ಹಿಡಿದಿರಿಸುವ ಜಾಣ್ಮೆಯಿದೆ[15]. ಎಂಬುದು ಗಮನೀಯ ಅಂಶವಾಗಿದೆ.

ಇಪ್ಪತ್ತನೆಯ ಶತಮಾನದ ಮಧ್ಯಂತರ ಯುಗದಲ್ಲಿ ಕನ್ನಡ ಕಾವ್ಯ ರಚನೆ, ಕಾವ್ಯ ಕುರಿತಾದ ವಿಪುಲ ಚಿಂತನೆ, ಉತ್ಕೃಷ್ಟ ಕೃತಿಗಳ ಬಗೆಗಿನ ಚಿಂತನೆ, ಚರ್ಚೆಗಳನ್ನೆಲ್ಲ ದೇಶಾಂಶರು ವಿಕ್ಷಿಸುತ್ತಿದ್ದರು. ನವೋದಯ ಸಾಹಿತ್ಯಕಾಲ ಮುಗಿಯುತ್ತ, ನವ್ಯ ಪ್ರಕಟವಾಗುತ್ತ ಪ್ರತೀಕ, ಸಂಕೇತಗಳ ಬಳಕೆ ಲಯ, ಪ್ರಾಸಗಳ, ಕಳಚುವಿಕೆ ಮೊದಲಾದ ಸಂಧಿಗ್ಧ ಸಂದರ್ಭದಲ್ಲಿ ಕಾವ್ಯ ರಚನೆಗೆ ತೊಡಗಿದವರು. ಮೊದ ಮೊದಲು ಭಕ್ತಿ ಮತ್ತು ನೀತಿ ಪ್ರಧಾನ್ಯಕ್ಕೆ ಮಣಿದು ನಂತರ ಸಾರ್ವತ್ರಿಕ ನೋವು ನಲಿವುಗಳಿಗೆ ಮಿಡಿದದ್ದು ನನ್ನ ಕವನಗಳ ಕೊಂಡಿಗಳಿಂದ ಗುರುತಿಸಬಹುದಾಗಿದೆ. ಬಹು ವರ್ಷಗಳಿಂದ ಬರೆಯುತ್ತ ಬಂದು ಈಗ ಬೆಳಕು ಕಂಡುದರಿಂದ ಈ ಸಂಕಲನ ಹಳೆದು ಹೊಸತುಗಳ ಸಮ್ಮಿಶ್ರಣ[16] ವೆಂದು ಕವಿಯೇ ಹೇಳಿಕೊಳ್ಳುತ್ತಾರೆ. ೧೯೭೦ರ ರಿಂದ ೮೦ ರ ದಶಕದಲ್ಲಿ ಬರೆದಿರಬಹುದಾದ ಇಲ್ಲಿಯ ಅನೇಕ ಕವನಗಳು ಆರಂಭದಲ್ಲಿ ಕವಿಯು ಅನುಭವಿಸಿದ ತಳಮಳ, ಚಡಪಡಿಕೆ, ಭಾವತೀವ್ರತೆಯ ಸಂವೇದನಗಳು, ರೂಪ ತಾಳುವಲ್ಲಿ ಅಶಕ್ತತೆಯನ್ನು ಹೊತ್ತು ನಿಂತಿರುವುದನ್ನು ಮಾಡಬೇಕೆನು ಹಣಿಬಾರಿನ 'ಮಣ್ಣಿನ ಮಕ್ಕಳು', 'ತಿಳಿತಾದ ಬಡವನ ಪೆಟ್ಟು', 'ಏ ಪಾರ್ಥೇನಿಯಮ್ ಇಸ್ಪಿಟ್' ಮೊದಲಾದ ಕವನಗಳ ಆಶಯಕ್ಕೆ ವಸ್ತುವಿನ ಗಟ್ಟಿತನಸಿಗದೆ, ಭಾಷೆಯ ಸೊಗಸು ಅಭಿವ್ಯಕ್ತಿಯಲ್ಲಿ ಅಲ್ಲಲ್ಲಿ ಮಿಂಚುತ್ತಿರುವುದನ್ನು ಅರಿಯಬಹುದು. ಕೆಲವು ಕವನಗಳಲ್ಲಿ ಬದುಕಿನ ಕಷ್ಟ ಕೋಟಲೆಗಳ ವಾಸ್ತವ ಚಿತ್ರದೊಂದಿಗೆ ಭವಿಷ್ಯದ ಬಗೆಗೆ ಆಶಾದಾಯಕ ನಿಲುವನ್ನು ಮಾತ್ರ ವ್ಯಕ್ತಪಡಿಸುತ್ತವೆ. ಯಾವ ಸಾಹಿತ್ಯದ ತಳುವಳಿಗೂ ಭದ್ಧರಾಗದೇ ವಾಸ್ತವ ಪ್ರಜ್ಞೆ, ಅಂತರ್ಮುಖತೆ, ಸ್ವಾಭಿಮಾನ, ಅಸ್ತಿತ್ವದ ಹುಡುಕಾಟ, ಸ್ವಂತಿಕೆಯ ಕೊಗು ಮೊದಲಾದ ಆಶಯಗಳನ್ನು ಹೊತ್ತು ನಿಂತಿರುವ 'ಬದುಕಿನ ಸುತ್ತ' ಕವನ ಸಂಕಲನ ಜೀವನ ಪ್ರೀತಿಯನ್ನು ಅಭಿವ್ಯಕ್ತಪಡಿಸುವ ನಿಟ್ಟಿನಲ್ಲಿ ಯಶಸ್ವಿಯಾಗಿವೆ.

ಮುಖವಾಡಗಳ ಹಿಂದಿರುವ ಕ್ರೂರತನವನ್ನು ಬಿಂಬಿಸುವಲ್ಲಿ ಆವೇಶ ಪಡದೇ ವಿಡಂಬನೆಯ ಚಾಟಿ ಏಟಿನಿಂದ ಹೊಡೆಯುವುದರ ಮೂಲಕ ಎಚ್ಚರಿಸುವುದು. ಕವಿಯ ಕವನಗಳ ವಿಶೇಷ ಅನುಭವ ಕಾವ್ಯತ್ವವನ್ನು ಮೀರಿ

---

[15] ವೀರೆಂದ್ರ ಸಿಂಪಿ – ಬದುಕಿನ ಸುತ್ತ ಕುರಿತ – ಪು ೪೭.

[16] ದೇಶಾಂಶ ಹುಡುಗಿ – ಬದುಕಿನ ಸುತ್ತ – ನನ್ನ ಮಾತು– ಪು ೯.

ನಿಂತರೂ ಕೂಡ ಭಾಷೆಯ ಮೆರಗಿನಿಂದಾಗಿ ಭರವಸೆ ಮೂಡಿಸುತ್ತಾರೆಂಬುದು[17] ಮುಖ್ಯವಾದ ಮಾತು.

ಜೀವನಪ್ರೀತಿಯಿಲ್ಲದವನು ಕವಿಯಾಗಲಾರ, ಕಲಾವಿದನಾಗಲಾರ ಬದುಕನ್ನು ಕುರಿತು ನಿಜವಾದ ಪ್ರೀತಿಯಿದ್ದವನಿಗೆ ಮಾತ್ರ ಅದರ ಸಮೃದ್ಧಿಯಲ್ಲಿ, ವೈವಿಧ್ಯತೆಯಲ್ಲಿ, ಸ್ವಾತಂತ್ರ್ಯದಲ್ಲಿ ಹಾಗೂ ಶ್ರೇಯಸ್ಸಿನಲ್ಲಿ ಆಸಕ್ತಿ ಹುಟ್ಟಿತು. ಅಂಥ ಗಾಢವಾದ ಜೀವನ ಪ್ರೀತಿಯನ್ನು ತಮ್ಮದಾಗಿಸಿಕೊಂಡವರು ಹಿರಿಯರಾದ ದೇಶಾಂಶ ಹುಡುಗಿಯವರು[18]. ಜನ ಜಾಗೃತಿಯ ಸಂದೇಶವಾಹಕರಾಗಿ ಬೀದರ ಜನರಲ್ಲಿ ಅಕ್ಷರ ಜ್ಯೋತಿಯನ್ನು ಹೊತ್ತಿಸಿದ್ದಾರೆ. ತನ್ನ ತಂದೆಯಿಂದ ಬಂದ ಅಕ್ಷರ ಜ್ಞಾನ ತನ್ನಲ್ಲೇ ಸೀಮಿತಗೊಳಿಸಿಕೊಳ್ಳದೆ, ತಾವು ಶಿಕ್ಷಕರಾದ ೧೯೫೪ ರ ವರ್ಷದಲ್ಲಿಯೇ 'ದಲಿತ' ಮಕ್ಕಳಿಗಾಗಿ ರಾತ್ರಿ ಶಾಲೆ ಆರಂಭಿಸಿದರು. ಮುಂದೆ ಅವರು ೧೯೬೫ ರಲ್ಲಿ ಮುಡಬಿವಾಡೆಗೆ ಬಂದಾಗ ಅಲ್ಲಿಯೂ ಯಾದವಗೊಲ್ಲರು ಹಾಗೂ ದಲಿತರಿಗಾಗಿ ಅಕ್ಷರ ಕೇಂದ್ರ ಸ್ಥಾಪಿಸಿದರು. ನಂತರದಲ್ಲಿ ಸಾಕ್ಷರತಾ ಆಂದೋಲನಕ್ಕಾಗಿ ತಮ್ಮನ್ನು ಸಂಪೂರ್ಣ ಮುಡಿಪಾಗಿಟ್ಟುಕೊಂಡು, ದುಡಿಯುತ್ತಿರುವಾಗ ಅದರ ಫಲವಾಗಿ ಅವರ ಪ್ರತಿಭೆಯಿಂದ ಅರಳಿದ ಚಿಕ್ಕ ಕೃತಿ ಪುಷ್ಪ 'ಅಕ್ಷರ ಜ್ಯೋತಿ'.

ಅಕ್ಷರ ಜ್ಞಾನವಿಲ್ಲದ್ದರಿಂದಲೇ ಯುಗ ಯುಗಗಳಿಂದ ವುಳ್ಳವರ ಜೀತದಾಳಾಗಿ ಅವರ ಅನ್ಯಾಯ ಅತ್ಯಾಚಾರ ಸಹಿಸುತ್ತ ಅಳುತ್ತ ಬದುಕಿದ ಶ್ರೀ ಸಾಮಾನ್ಯ ದುಡಿದು ದಣಿದು, ಬೇವರನ್ನು ಸುರಿಸುತ್ತ ಬಡತನದಲ್ಲಿಯೇ ಸಾಯುವಂತಹ ಸ್ಥಿತಿ ತಂದು ಕೊಂಡಿರುವುದನ್ನು ಗಮನಿಸಿದ ದೇಶಾಂಶ ಹುಡಗಿಯವರು, ಈ ಕಷ್ಟ ನಿವಾರಣೆಗೆ ಜನರ ಅಕ್ಷರ ಬಡತನ ಮೊದಲು ತೊಲಗಬೇಕೆಂದು ಆಶಿಸಿದರು. ಬದುಕಿನಲ್ಲಿಯ ಜಿಂದಗಾಣಿ ತಿಳಿಯಲು, ದೇಶ, ಸರಕಾರ, ನಡೆ, ನುಡಿ, ರೀತಿ-ನೀತಿಗಳಲ್ಲಿ ಸುಸಂಸ್ಕೃತಿ ಮೂಡಿ ಬರಲು ಜ್ಞಾನ ಬೇಕೆಂಬುದನ್ನು ಸರಳವಾಗಿ ಹೇಳುತ್ತಾರೆ. ನ್ಯಾಯ ಕಾನೂನು ತಿಳಿದು ಹೋರಾಟದ ಹಾದಿ ಹಿಡಿಯಲು, ನ್ಯಾಯ ಪಡೆಯಲು ಅಕ್ಷರ ತಿಳಿದು ಜ್ಞಾನ ಅವಶ್ಯಕ. ಅದಕ್ಕಾಗಿಯೇ ಕವಿಯು

ಅಜ್ಞಾನವನು ಕಳಿಲಾಕಾ
ವಿಜ್ಞಾನವನು ತಿಳಿಲಾಕಾ
ಜ್ಞಾನಿ ಜನರು ಹೇಳ್ಯಾರಾ
ಕಲಿಯಿರಿ ಕಲಿಸಿರಿ ನೆರೆಯವರಾ[19].

---

[17] ಕೆರಳ್ಳಿ ಲಕ್ಷ್ಮರೆಡ್ಡಿ-ಬದುಕಿನ ಸುತ್ತ ಕುರಿತು - ಅರಜ್ಯೋತಿ ಹಿಂಬರಿಯಲ್ಲಿ.

[18] ಪ್ರೇಮ ಶಿರ್ಶೆ-ದೇಶಾಂಶರ ಅಕ್ಷರ ಜ್ಯೋತಿ - ಚೇತನ ಶಿಲ್ಪಿ - ಪು ೧೪೪.

[19] ದೇಶಾಂಶ ಹುಡುಗಿ - ಅಕ್ಷರ ಜ್ಯೋತಿ - ೧೯೯೩ - ಪು ೨.

ಎಂದು ಜನತೆಯನ್ನು ಕರೆಯುತ್ತಾರೆ. ಕಲಿಯದವರ ಬದುಕು ಅರ್ಥಹೀನವಾಗುವುದನ್ನು ಪರಿಣಾಮಕಾರಿಯಾಗಿ ತಿಳಿಸುವ ಅವರ ಪ್ರತಿಭೆ ನಿಜಕ್ಕೂ ಪ್ರಶಂಶನೀಯವಾಗಿದೆ.

'ಕಲಿಲಾರದವರೆಲ್ಲ ಕ್ವಾಣಾಎತ್ತಿನಂಗ
ಬಂಡಿಗೆ ಹೂಡಿ ಹೊಡೆದಾಂಗ ।ಕಡಿಕಾಲ।
ಮೇವು ನೀರಿಲ್ದೆ ಮಡಿದಾಂಗ

ಅಕ್ಷರ ಕಲಿತರ ಅಜ್ಞಾನ ಓದ್ಯಾದ
ಸುಜ್ಞಾನ ಸಂಪದ ಬೆಳೆದಾದ। ಜಗತ್ನ್ಯಾಗ
ಮೇಲು ಕೀಳೆಂಬಾದು ಅಳಿದಾದ[೨೦],

ಎಂದು ತಿಳಿಸುವಲ್ಲಿ ಅವರ ಈ ಕೃತಿಯ ಆಶಯ ಸ್ಪಷ್ಟವಾಗುತ್ತದೆ.

ಶತಮಾನಗಳಿಂದ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ತುಳಿತಕ್ಕೊಳಗಾದ ಮಹಿಳೆಯರಿಗೆ 'ಅಕ್ಕ ತಂಗೇರೆ ಅವ್ವದೇರೆ ಚಿತ್ತವಿಟ್ಟು ಕೇಳ್ರೆವ್ವ। ಓದಲ್ದೋರು ಹುಟ್ಟಿ ಬಂದ್ರು ಸತ್ತಾಂಗ್ರೆವ್ವ' ಎಂದು ತಿಳಿಹೇಳುತ್ತ ಅವರನ್ನು ಕರೆದು ಕಲಿಯಲು ಆಹ್ವಾನಿಸುವ ರೀತಿ ಹಾಗೂ ಇದರಲ್ಲಿ ದೇಶಾಂಶರು ಹಿಡಿದಿಟ್ಟು ಅಭಿವ್ಯಕ್ತಿಸಿರುವ ಅಶಿಕ್ಷಿತರ ಸಂದರ್ಭಗಳು ಕಣ್ಣಟ್ಟಿ ನಿಲ್ಲುತ್ತವೆ.

'ಸುಳ್ಳು ಬರೆ ಮಾಡಲಾಕಾ। ಖರೆ ಸುಳ್ಳು ಮಾಡಲಾಕ
ಚುಗಲಿ ಮಾತು ಹೇಳಲಾಕಾ ಕರದಿಲ್ಲರೆವ್ವ
ನಿಮ್ಮ ಕಾಗ್ದಾ ನಿಮ್ಮ ಪತ್ರಾ ನೀವೆ ಓದಿ ತಿಳ್ಕೋಲಾಕಾ।
ಕೈಯ ಮುಗಿದು ಕೇಳ್ಕೋತಿವಿ ಕಲಿಯೀರೆವ್ವ[೨೧]'

ಎನ್ನುವ ನುಡಿಗಳನ್ನು 'ಗೀ ಗೀ' ಪದದ ದಾಟಿಯಲ್ಲಿ ಹಾಡುತ್ತ ಜನರನ್ನು ಸೇರಿಸಿ ಅವರಿಗೆ 'ಅಕ್ಷರ' ಜ್ಞಾನ ನೀಡಿದವರು ಈ ಕವಿ. ಹೆಣ್ಣು ಮಕ್ಕಳಿಗೆ ಅಕ್ಷರದ ಮಹತ್ವ ಹೇಳುತ್ತಾ, ಅವರ ಬದುಕಿನ ಸಂದರ್ಭಗಳನ್ನು ನೆನಪಿಸುತ್ತಾ ಎಚ್ಚರಿಸುವ ಇಲ್ಲಿಯ ಅಭಿವ್ಯಕ್ತಿಯ ರೀತಿ ನಿಜಕ್ಕೂ ಪರಿಣಾಮಕಾರಿಯಾದುದು. ಹಿಂದಿನ ಕಾಲದ ಹಲವು ಸಂಪ್ರದಾಯಗಳನ್ನು, ಮೂಢನಂಬಿಕೆಗಳನ್ನು ತೊಲಗಿಸಲು, ಬಾಲ್ಯವಿವಾಹ ಕೈಬಿಡಲು,

---

[20] ದೇಶಾಂಶ ಹುಡುಗಿ – ಅಕ್ಷರ ಜ್ಯೋತಿ – ೧೯೯೩ – ಪು ೫.

[21] ದೇಶಾಂಶ – ಅಕ್ಷರ ಜ್ಯೋತಿ – ಪು–೨.

ಗಂಡು-ಹೆಣ್ಣು ಮಕ್ಕಳಲ್ಲಿ ಭೇದ ಮಾಡದೆ ಇರಲು, ಸಂಸಾರದ ಗಾಲಿ ಸುರಕ್ಷಿತ ನಡೆಯಲು ಹೆಣ್ಣು-ಗಂಡುಗಳಿಬ್ಬರೂ ಸುಶಿಕ್ಷತರಾಗಿರಬೇಕು. ಅಂದಾಗಲೇ ಸಮೃದ್ಧಿ ಸಾಧ್ಯವೆಂಬುದನ್ನು ಸರಳ ಹಾಗೂ ತಿಳುವಳಿಕೆಯ ರೀತಿಯಲ್ಲಿ ಇಲ್ಲಿ ಹೇಳಿದ್ದು ಓದುಗರು ಹಾಗೂ ಕೇಳುಗರ ಮೆಚ್ಚುವಂತಹದ್ದು.

ಬೀದರ ನೆಲ ಶರಣರು ಮೆಟ್ಟಿದ ಪಾವನ ಧರೆ. ಇಲ್ಲಿ ಕಾಜಿನ ಕಂಬ, ನಾನಕ ಝರಣ, ನರಸಿಂಹ ಝರಣ, ಪಾಪನಾಶಗಳಂತಹ ಪವಿತ್ರ ಧಾರ್ಮಿಕ ಸಮನ್ವಯ ಕ್ಷೇತ್ರಗಳಿವೆ. ಶರಣರ ದಾರಿಯಲ್ಲಿ ನಡೆದ ಭಾಲ್ಕಿಯ ಚೆನ್ನಬಸವ ಪಟ್ಟದ್ದೇವರ ಎದೆಯಾಗ ಬೆಳಕಾಗಿದ್ದ ಬಸವನ ಈ ಕಲ್ಯಾಣ ನಾಡಿನಲ್ಲಿ ಅಮೂಲ್ಯ ಜ್ಞಾನ ಸಂಪತ್ತು 'ವಚನ ಸಾಹಿತ್ಯ' ಹುಟ್ಟಿ ಬೆಳೆಯಿತು. ಈ ಕಲ್ಯಾಣ ಪುಣತಿಯಲ್ಲಿ ಬಸವನೆಂಬ ಜ್ಯೋತಿ ತೊಳಗಿ ಬೆಳಗುವಂತಾಗಬೇಕಾದರೆ ಇಲ್ಲಿಯ ಜನರು ಅಕ್ಷರಗಳನ್ನು ಪ್ರೀತಿಸುವಂತಾಗಬೇಕು. ಈ ಅಕ್ಷರ ಜ್ಯೋತಿ ನಾಡಿನಾದ್ಯಂತ ಬೆಳಗಿದರೆ ಕವಿ ಕಂಡ ಕನಸು ರೂಪಗೊಳ್ಳುತ್ತದೆ ಎಂಬುದೇ 'ಅಕ್ಷರ ಜ್ಯೋತಿ'ಯ ಆಶಯವಾಗಿದೆ. ಇಲ್ಲಿಯ ಗ್ರಾಮ, ಭಾಷೆ, ಶೈಲಿ, ಕವನಗಳ ಗೇಯಗುಣ, ಹಾಡಿಗೆ ಅಳವಡಿಸಿರುವ ಜಾನಪದಲಯಗಳಿಂದಾಗಿ ಇಲ್ಲಿಯ ಕವನಗಳು ಮನ ಸೆಳೆಯುತ್ತವೆ[22]. ಎಂಬುದು ಸರಿಯಾದ ಮಾತ್ತೆನ್ನಬಹುದು.

## ವಚನ ರಚನೆ:

ಪಕ್ವವಾದ ಅನುಭವಗಳು, ವೈಶಿಷ್ಟಪೂರ್ಣವಾದ ಕಾವ್ಯಶೈಲಿ, ಹಾಗೂ ಆಕರ್ಷಕವಾದ ಅಭಿವ್ಯಕ್ತಿಗಳೆಲ್ಲವೂ ಕೂಡಿದಾಗ ದೇಶಾಂಶರು ಹೊರ ತಂದಿರುವ ಕೃತಿ-೧ 'ದಿಗಂಬರ ವಚನಗಳು'. ರೀತಿಯಲ್ಲಿ ಹೊಸತನ ಅಭಿವ್ಯಕ್ತಿಯಲ್ಲಿ ನವೀನತೆಯನ್ನು ತೋರಿಸುವ ಒಂದು ವಿಶಿಷ್ಟ ಕೃತಿ ಇದು. ೭೫ ರ ವಯಸ್ಸಿನ ಮಾಗಿದ ಅನುಭವದ ಮೂಸೆಯಲ್ಲಿ ಮೂಡಿರುವ ಇದು ಹೆಸರಿಗೆ ತಕ್ಕಂತೆ ವಚನಗಳ ಮಾದರಿಯಲ್ಲಿದೆ. ವಚನ ಸಾಹಿತ್ಯದ ಆಳವಾದ ಅಭ್ಯಾಸ ಹಾಗೂ ವಚನ ಸಂಸ್ಕೃತಿಯ ಪ್ರಭಾವದಿಂದಾಗಿ ದೇಶಾಂಶ ಹುಡಗಿಯವರು ವಚನ ರಚನೆಗೆ ತೊಡಗಿದವರಾಗಿದ್ದಾರೆ.

೧೨ ನೆಯ ಶತಮಾನದ ಶರಣರಿಗೆ 'ವಚನ'ವು ಅಭಿವ್ಯಕ್ತಿಯ ಮೂಲ ಹಾಗೂ ಅದೊಂದೇ ಮಾಧ್ಯಮವಾಗಿ ಬಳಕೆಯಾಗುತ್ತಿತ್ತು. ಆದರೆ ಆಧುನಿಕ

---

[22] ಡಾ. ಪ್ರೇಮಾ ಶಿರ್ಶೆ – ಚೇತನ ಶಿಲ್ಪಿ – ಪು ೧೫೧.

ವಚನಕಾರರಿಗೆ ಈ 'ವಚನ ರಚನೆ'ಯು ಒಂದು ಹೊಸ ಕಾವ್ಯ ರೂಪವಾಗಿ ಹಾಗೂ ಮತ್ತೊಂದು ಸಾಹಿತ್ಯದ ಪ್ರಕಾರವಾಗಿ ರೂಪಿತಗೊಂಡಿರುವುದನ್ನು ಗಮನಿಸಬಹುದು. ಈ ಪ್ರಕಾರವು ಸಹ ೧೨ ನೆಯ ಶತಮಾನ ಸಾಹಿತ್ಯದಂತೆ ಜನಪರ ಸಂವೇದನೆಯನ್ನು ಕೂಡಿಸಿಕೊಂಡು ಕನ್ನಡ ಭಾಷೆಯ ಮತ್ತೊಂದು ಅರ್ಥಶಕ್ತಿಯಾಗಿ, ವ್ಯಕ್ತಿದಿಷ್ಟ ಅಭಿವ್ಯಕ್ತಿಯಾಗಿ, ಸಮಷ್ಠಿಯ ಧ್ವನಿಯಾಗುತ್ತಿರುವುದು ಇದರ ಹೆಗ್ಗಳಿಕೆ ಎನಿಸುತ್ತಿದೆ.

ಹೆಣ್ಣಿನ ಶೋಷಣೆ, ವರದಕ್ಷಿಣೆ ಕಿರುಕುಳ ರೈತರ ಸಾವು, ರಾಜಕಾರಣಿಗಳ ಹಗರಣಗಳು, ಬಸವ ಮುಖವಾಡದವರ ಉಪಟಳಗಳು ನಾರಿ ನಾರಿಗೆ ವೈರಿ, ಎಂಬಿತ್ಯಾದಿಗಳೆಲ್ಲ ಇಲ್ಲಿ ವಚನಗಳಾಗಿನಿಂತಿವೆ[೨೨]. 'ದಿಗಂಬರ್ ಕರಿಬಸವೇಶ್ವರ' ಎಂಬ ಅಂಕಿತದ ಈ ವಚನಗಳು, ರೂಪಾಂಶದಲ್ಲಿ ಶರಣರ ವಚನಗಳಿಗೆ ಭಿನ್ನವಾದ ಸಂಬೋಧನಾ ರೂಪದ ಗದ್ಯ ಕಾವ್ಯದ ಮಾದರಿಗಳಾಗಿವೆ.

ಸುಳಿಗೇಡಿ ಅತ್ತೆ, ಕಿಡಿಗೇಡಿ ಮಾವ
ಕುಂತುಂಬ ಗಂಡ ಈ ಮೂವರು ಹೆಣ್ಣಿಗೆ
ಕಡು ವೈರಿಗಳೆಂದ ದಿಗಂಬರ ಕರಿಬಸವೇಶ್ವರ[೨೩].

ಇದರಲ್ಲಿ ಮನುಷ್ಯ ಸ್ವಭಾವದ ದ್ವಂದ್ವ, ಲೋಕ ನೀತಿಯ ವಿಸಂಗತಿಗಳನ್ನು ಕವಿಯು ಮುಕ್ತ ಬಂಧದಲ್ಲಿ ನಿಷ್ಠುರವಾಗಿ ಹಿಡಿದಿಟ್ಟಿರುವುದನ್ನು ಗುರುತಿಸಬಹುದಾಗಿದೆ ಎಂದು ರೀತಿಯಲ್ಲಿ ಆಸ್ತಿಕನೆನಿಸುವ ಹಾಗೂ ಮತ್ತೊಂದು ರೀತಿಯಲ್ಲಿ ನಾಸ್ತಿಕನೆನಿಸುವ ದೇಶಾಂಶರು ಈ ವಚನಗಳ ಮೂಲಕ ಅಲ್ಲಲ್ಲಿ 'ಸರ್ವಕರ್ತನ' ವಿರುದ್ಧ ದಂಗೆ ಎದ್ದಿರುವುದು ಎದ್ದುಕಾಣುತ್ತದೆ.

ಕಾಡುವ ದೇವರು ಬೇರೆ,ಬೇಡುವ ದೇವರು ಬೇರೆ
ಆಳುವ ದೇವರು ಬೇರೆ, ಹುಚ್ಚೇರಿ ಕುಣಿವ ದೇವರು ಬೇರೆ
ಹುಟ್ಟಿಸುವ ದೇವರು ಬೇರೆ, ಸಾಕುವ ದೇವರು ಬೇರೆ
ಕೊಲ್ಲುವ ದೇವರು ಬೇರೆ
ನಿನ್ನ ಕೆಲಸವನ್ನು ನೆರವೇರಿಸಲು ಅನ್ಯರಿಗೆ ನೇಮಿಸುವ ನಿನ್ನ ಉಳಿಸುವ ದೇವರು ಬೇರೆ. ಅದೆಂಥ ದೇವರು ಹೇಳಯ್ಯಾ ದಿಗಂಬರ ಕರಿಬಸವೇಶ್ವರ[೨೪]?

ಹಾಗೆಯೇ



---

[23] ದೇಶಾಂಶರು – ದಿಗಂಬರ ವಚನಗಳು – ಬೆನ್ನುಡಿಯಲ್ಲಿ – ಪು–೪.

[24] ದೇಶಾಂಶರು – ದಿಗಂಬರ ವಚನಗಳು – ಬೆನ್ನುಡಿಯಲ್ಲಿ – ಪು– ೨೦.

ನಿನ್ನ ಹಂಗೇಕೆ? ನಿನ್ನ ನಾಮದ ಹಂಗೇಕೆ?
ನಿನ್ನ ಬಾಲ ಬಡುಕರ ಹಂಗೇಕೆ?
ನಿನ್ನನ್ನು ನಿನ್ನವರನ್ನು ಸಾಕುವ ನನಗೆ
ಯಾರ ಹಂಗೇಕೆ ದಿಗಂಬರ ಕರಿಬಸವೇಶ್ವರ[25]?

ಮನುಷ್ಯ ಸ್ವಭಾವದ ದ್ವಂದ್ವತನವನ್ನು, ತಮ್ಮ ಕಾವ್ಯಾಸ್ತಿತ್ವದ ಮೂಲ ಚಿಂತನೆಯಲ್ಲಿ ಹರಳುಗಟ್ಟಿಸಿ ತೋರಿಸುವ 'ದಿಗಂಬರ ವಚನಗಳು' ಕೃತಿ ತುಂಬಾ ವಾಸ್ತವವನ್ನು ಮೆರೆಯುತ್ತದೆ. ಇಲ್ಲಿಯ ರಚನೆಗಳಲ್ಲೆಲ್ಲ ಕವಿಯ ಅನುಭವಮೆಲುಕು ಹಾಕುವಂತೆ ಅಭಿವ್ಯಕ್ತಗೊಂಡಿದೆ. ಕೊಳಕು ಅಳಿಯಂದಿರ ಉಪಟಳಗಳು, ವಚನಾಂಕಿತ ತಿರುಚುವಿಕೆ, ಆಧುನಿಕ ಶಿಕ್ಷಣ ಪದ್ಧತಿಯ ಕಿರಿಕಿರಿ, ಸುಶಿಕ್ಷಿತರ ಸ್ವೇಚ್ಛಾಚಾರ, ರಾಜಕಾರಣಿಗಳ ಕುತಂತ್ರ, ಲೂಟಿಗಾರಿಕೆ, ಕನ್ನಡ ಕಾರ್ಯದಲ್ಲಿಯ ರಾಜಕೀಯ, ಪ್ರಜಾಪ್ರಭುತ್ವದ ಪ್ರಹಸನ, ಶಾಸಕಾಂಗ–ಕಾರ್ಯಾಂಗ–ನ್ಯಾಯಾಂಗಗಳ ಹಣಾಹಣಿ ಮುಂತಾದ ವಿಷಯಗಳು ಕವಿಯನ್ನು ಕಾಡಿ ಕಾಡಿ, ಹಣ್ಣು ಹಣ್ಣು ಮಾಡಿವೆ. ಅವುಗಳ ವಿರುದ್ಧದ ಪ್ರತಿಭಟನೆಯೇ, ರೋಷವೋ, ಇಲ್ಲವೇ, ಪರಿಹಾರ ಸೂಚನೆಯೇ ಈ ಕಾವ್ಯಗಳಲ್ಲಿದೆ ಎಂದಲ್ಲ. ಅವುಗಳನ್ನು ಸಮಾಜದ ಮುಂದಿಡುವ ಒಂದು ಮಹದಾಶಯ ಇಲ್ಲಿ ವ್ಯಕ್ತವಾಗಿರುವುದನ್ನು ನಾವು ಗಮನಿಸಬಹುದು. ಚಿಂತನೆಯ ಚುರುಕಾದ ಅಭಿವ್ಯಕ್ತಿಗಳು ಕುತೂಹಲದಾಯಕವಾಗಿದ್ದು, ಕೆಲವು ಸಣ್ಣ ವಚನಗಳಾಗಿಯೂ ಮೂಡಿ ಬಂದಿವೆ. ಕಿರಿದರಿಲ್ಲಿ ಪಿರಿದರ್ಥವಿಟ್ಟು ಹೇಳುವ ದೇಶಾಂಶ ರೀತಿ ನಿಜವಾಗಿಯೂ ಇಲ್ಲಿ ಮೆಚ್ಚುಗೆ ಪಡೆಯುತ್ತದೆ. ಅವರ–

'ಕವಿಗೂ ಕಪಟಗೂ ಒಂದೇ ಅಂತರ
ಕವಿ ಕಾವ್ಯದ ಜನಕ, ಕಪಟ ಪರಮ ಘಾತಕ
ಎನ್ನ ಕವಿಯಾಗಿಸೆಂದ ದಿಗಂಬರ ಕರಿಬಸವೇಶ್ವರ[26]'

ಹನಿಗವನಗಳಂತಿರುವ ಇಂಥ ಎಷ್ಟೋ ಮಿನಿ ವಚನಗಳು ಪರಿಣಾಮಕಾರಿಯಾಗಿ ಮೂಡಿವೆ. ಇವುಗಳಿಗೆ ಹಚ್ಚಲಾಗಿರುವ 'ಅಂಕಿತನಾಮ'ವನ್ನು ತಗೆದಿರಿಸಿ ಓದಿದರೆ ಇವು ಹನಿಗವನಗಳಾಗಿ ನಿಲ್ಲುತ್ತವೆ. "ಅಭಿವ್ಯಕ್ತಿಗೆ ಅನುಕೂಲವಾಗಿರುವ ಈ ಪುಟ್ಟಗಾತ್ರದ ಕವಿತೆಗಳಲ್ಲಿ ಹಾಸ್ಯ, ವಿಡಂಬನೆ, ಕಟಕಿ

---

[25] ದೇಶಾಂಶರು – ದಿಗಂಬರ ವಚನಗಳು – ಬೆನ್ನುಡಿಯಲ್ಲಿ – ಪು–೮೭.

[26] ದೇಶಾಂಶ ಹುಡುಗಿ ದಿಗಂಬರ ವಚನಗಳು – ಪುಟ–೯೭.

ತುಂಟಾಟದಂತಹ ಹೊರ ರಸ ಭಾವವಗಳು ಸೇರಿಕೊಂಡಿದ್ದರಿಂದ ಈ ಪ್ರಕಾರದ ಕವಿತೆಗಳೂ ತುಂಬಾ ಜನಪ್ರೀಯ ಕವಿತೆಗಳಾಗುತ್ತಿವೆ[೨೭]" ಎಂಬುದನ್ನು ಅಲ್ಲಗಳೆಯಲಾಗದು.

ಶ್ರೀ ಶಾಂತಪ್ಪನವರು ಇಲ್ಲಿಯ ವಚನಗಳನ್ನು ಕೇವಲ ಸಾಹಿತ್ಯ ಪ್ರಕಾರವಾಗಿಯಷ್ಟೇ ಸ್ವೀಕರಿಸಿಲ್ಲ. ಹಿಂದಿನ ಶರಣರ ಆದರ್ಶಗಳು ಅವರ ಜೀವನದಲ್ಲಿ ಅಳವಟ್ಟಿವೆಯೆನಿಸುತ್ತದೆ. ಅಂತೆಯೇ ಅವರಲ್ಲಿ ವಚನಕಾರರ ಸಹಜ ವಿಡಂಬನೆ, ಜನ ಕಳಕಳಿ ತುಂಬಿಕೊಂಡಿದೆ. ಹೀಗಾಗಿ ದೇಶಾಂಶರಿಗೆ ವಚನಗಳನ್ನು ಬರೆಯುವ ಪೂರ್ಣ ಅರ್ಹತೆ ಇದೆಯೆಂಬುದನ್ನು ನಾನಿಲ್ಲಿ ಒಪ್ಪಿಕೊಳ್ಳುತ್ತೇನೆ. ಅವರು ವಿದ್ಯಾರ್ಥಿ ದೆಸೆಯಿಂದಲೂ ಸರಳತೆಯ ಉಪಾಸಕರು, ಉನ್ನತ ವಿಚಾರಗಳ ಆರಾಧಕರು. ಜೀವನವನ್ನು ಎಂದೂನಿರಾಶೆಯ ಕಣ್ಣುಗಳಿಂದ ನೋಡಲಿಲ್ಲ. ಕಷ್ಟಗಳು ಹಿಂಡು-ಹಿಂಡಾಗಿ ಬಂದರೂ ಗಂಡಸಾಗಿ ಸದೆ ಬಡಿದರು. ಆಪತ್ತುಗಳು ಗಂಟು ಗಂಟಾಗಿ ಎದುರಾದರೂ ಎಂಟಿದೆಯ ಬಂಟತೆಯಿಂದ ನಿವಾರಿಸಿದರು[೨೮] ಎಂಬುದನ್ನು ಅವರ ಆಪ್ತರಿಂದಲೇ ಅರಿಯಬಹುದು. ವಿಡಂಬಣ ಗುಣ ಪ್ರಧಾನವಾಗಿರುವ ದೇಶಾಂಶರ ವಚನಗಳು ಪ್ರಚಲಿತ ಸಮಸ್ಯೆಗಳನ್ನೆಲ್ಲ ಆವರಿಸಿಕೊಂಡು ನಿಂತಿವೆ. ಪ್ರತಿ ವಚನಗಳು ಒಂದೊಂದು ಹೊಸ ವಿಚಾರವನ್ನು ನೀಡುವುದರಿಂದ ಇಲ್ಲಿಯ ೫೫೫ ವಚನಗಳು ತುಂಬಾ ಸರಳವಾಗಿ ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿನಿತಿಂವೆ. ಇಲ್ಲಿಯ ಆಶಯ ಹಾಗೂ ಅಭಿವ್ಯಕ್ತಿ ಚಿಂತನೆಯ ಕಾವ್ಯವು ಮಧ್ಯಮ ಸ್ಥಾನಕ್ಕೆ ಸೀಮಿತವಾಗಿರುವುದನ್ನು ಕಾಣಬಹುದಾದರೂ ಇಲ್ಲಿ ಭಾವತೀವ್ರತೆಗಿಂತ ಬುದ್ಧಿ ಪ್ರಾಧಾನ್ಯತೆಗೆ, ನೀತಿ, ನಿರೂಪಣೆಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತಿರುವುದನ್ನು ಅರಿಯಬಹುದಾಗಿದೆ.

---

27 ಮಾಲತಿ ಪಟ್ಟಣಶೆಟ್ಟಿ 'ಅಕ್ಕ ಕೇಳವ್ವ'- ೨೦೦೧- ಪು ೧೫೫.

28 ಪ್ರೊ. ಬಿ. ಮಹಾದೇವಪ್ಪ 'ದಿಗಂಬರ ವಚನಗಳು' ಮುನ್ನಡೆಯಲ್ಲಿ 'VIII'

## ೧.೨. ಸಾಮಾಜಿಕ ಕಾಳಜಿಃ

೨೦ ನೆಯ ಶತಮಾನದ ಇಂದಿನ ಭಾರತದಲ್ಲಿ ಸಾಮಾಜಿಕ ಕಾಳಜಿಯು ಎಲ್ಲಾ ಕ್ಷೇತ್ರಗಳಲ್ಲಿ ಪ್ರಮುಖವಾಗುತ್ತಿದೆ. ದೇಶಾಭಿವೃದ್ಧಿಯಲ್ಲಿ ಸಾಮಾಜಿಕ ಚಿಂತನೆಯ ಅರಿವು ಇಂದು ಆವಶ್ಯಕವಾಗಿದೆ. ಅಂತೆಯೇ ಸಾಹಿತ್ಯ ರಂಗದಲ್ಲಿ 'ಸಾಮಾಜಿಕ ಕಾಳಜಿ'ಯು ಅತ್ಯಂತ ಪ್ರಮುಖವಾದ ಮೌಲ್ಯವೆಂದು ಇಂದು ಪರಿಗಣಿಸಲಾಗಿದೆ. ವ್ಯಕ್ತಿ ಕೇಂದ್ರಿತವಾಗಿದ್ದ ಸಾಹಿತ್ಯವು ಇಂದು ಸಮಾಜ ಮುಖಿಯಾಗಿ ಸಾರ್ವತ್ರಿಕತೆಯತ್ತ ಸಾಗುವುದು ಬಹುಮುಖ್ಯ. ಇಂದು ಕಾವ್ಯವು-ಬದುಕಿಗಾಗಿ ಅಥವಾ ಜೀವನಕ್ಕಾಗಿ ಇರಬೇಕು ಎಂದೇ ಆಶಿಸಲಾಗುತ್ತಿದೆ. ಹೀಗಾಗಿ ನಾವು ಈ ಸಮಯದಲ್ಲಿ ದೇಶಾಂಶರ ಕಾವ್ಯವನ್ನು ಸಮಕಾಲೀನ ಸಾಮಾಜಿಕ ಕಾಳಜಿಯ ದೃಷ್ಟಿಯಿಂದ ಅಭ್ಯಾಸಿಸುವುದು ಅವಶ್ಯವೆನಿಸಿದೆ.

ಇಂದು ಎದುರಿಸುತ್ತಿರುವ ಹಲವು ಸಮಸ್ಯೆಗಳ ಕರಾಳತೆಯು ದಿನೇ ದಿನೇ ಹೆಚ್ಚಾಗುತ್ತಿದೆ. ಪ್ರಸ್ತುತ ವ್ಯವಸ್ಥೆಯಲ್ಲಿ ಕವಿಗಳಾದವರು ಸಮಾಜದ ಕಡೆಗೆ ತಮ್ಮ ದೃಷ್ಟಿಯನ್ನು ನೆಡಬೇಕಾದುದು ಅನಿವಾರ್ಯವೆಂಬಂತಾಗಿದೆ. ಹೀಗಾಗಿ ಕನ್ನಡದಲ್ಲಿ ಬಂದ ನವ್ಯ-ದಲಿತ- ಬಂಡಾಯ ಕಾವ್ಯ ಪಂಥಗಳಿಂದ ಇಲ್ಲಿ ಕಾವ್ಯದಲ್ಲಿ ಸಾಮಾಜಿಕ ರಂಗಕ್ಕೆ ಹೆಚ್ಚಿನ ಪ್ರಾಮುಖ್ಯತೆ ಬಂದಿದೆ ಎನ್ನಬಹುದು. ಬಸವಣ್ಣ, ಗಾಂಧೀಜಿ, ಅಂಬೇಡ್ಕರ ಹಾಗೂ ಮಾರ್ಕ್ಸ್‌ರವಾದಗಳು ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದ್ದರಿಂದ ಸಾಹಿತ್ಯ ಹೆಚ್ಚು ಸಮಾಜಮುಖಿಯಾಯಿತು.

"ಸೃಜನಾತ್ಮಕ ಸಾಹಿತಿಯ ದೃಷ್ಟಿ, ಸಮಕಾಲಿನ ಸಮಾಜ ಹೇಗೋ ಹಾಗೆಯೇ ತನಗೆ ಹಿಂದಿದ್ದ ಸಮಾಜ ಹಾಗೂ ತನ್ನ ಪ್ರತಿಭಾ ದೃಷ್ಟಿಯಲ್ಲಿ ರೂಪುಗೊಳ್ಳಬೇಕೆಂದಿರುವ ಸಮಾಜ ಎಂಬ ಅಂಶಗಳಿಂದಲೂ ಕೂಡಿರುವುದು ಸಾಧ್ಯ. ಸಾಮಾಜಿಕ ಪ್ರಜ್ಞೆಯು ಸಾಹಿತಿಯು ಕಾರ್ಯಪ್ರವೃತ್ತನಾಗಿರುವುದಕ್ಕೆ ಗಟ್ಟಿಯಾದ ನೆಲೆಗಟ್ಟನ್ನು ಒದಗಿಸುತ್ತದೆ. ಇದು ಸಾಹಿತ್ಯದ ಮೂಲದ್ರವ್ಯ[೨೯]" ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು 'ದೇಶಾಂಶ' ಹುಡುಗಿಯವರು ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿರುವ 'ಸಾಮಾಜಿಕ ಕಾಳಜಿ'ಯನ್ನು ಅರಿಯಬಹುದಾಗಿದೆ.

"ಕೋಳಿನಾಸೆಗೆ ಬಿದ್ದ ನಾಯಿ, ಹಡೆದು ಸಾಕಿದ ತಾಯಿ[೩೦]"
ಹರ್ಕ ಉಟ್ಟೊ ಹರ್ಕ ತೊಟ್ಟು
ಹೊಟ್ಟಿನ್ ರೊಟ್ಟೀ ಹೋಟ್ಟೀಗ್ ತುರಕಿ

---

[29] ಜಿ.ಎಸ್. ಸಿದ್ದಲಿಂಗಯ್ಯ-ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ - ಪುಟ ೩೫೧.

30 ದೇಶಾಂಶ ಬದುಕಿನ ಸುತ್ತ - ಪು-೧

ರಟ್ಟಿ ಮುರ್ದು ಹೊಲ್ದಾಗ್ ದುಡ್ಡು
ಗಟ್ಟಿ ಮುಟ್ಟಿ ಒಕ್ಕಲಗಿತ್ತಿ[31]

ಸಂಪ್ರದಾಯಸ್ಥ ಕೌಟುಂಬಿಕ ಹಿನ್ನಲೆಯಿಂದ ಬಂದಿರುವ 'ದೇಶಾಂಶ'ರು ತಮ್ಮದೇ ಆದ ವೈಚಾರಿಕತೆಯನ್ನು ಬೆಳೆಸಿಕೊಂಡು ಬೆಳೆದವರು. ಅವರ ಕವಿ ಮನಸ್ಸು ಸಮಕಾಲಿನ ಬದಲಾವಣೆಗಳನ್ನು ಅರಗಿಸಿಕೊಳ್ಳುವ, ಕಾವ್ಯಕಟ್ಟುವುದರ ಸೂಚನೆಯಾಗಿ ನಿಂತಿದೆ. ಬೀದರ ಜಿಲ್ಲೆಯು ನಿಜಾಮ ದೊರೆಗಳ ಆಳ್ವಿಕೆಯಿಂದ ಒಂದು ರೀತಿ ಕಂಗಾಲಾಗಿತ್ತು. ಮೊಗಲಾಯಿ ಸಂಸ್ಕೃತಿ ತಲೆಎತ್ತಿ ನಿಂತು, ಇಲ್ಲಿಯ ಜನರು ತಮ್ಮ ನಡುವಳಿಕೆಗಳನ್ನು ಅದಕ್ಕೆ ಹೊಂದಿಸಿಕೊಂಡಿದ್ದರು. ಅದರಲ್ಲೂ ಮಹಿಳೆಯರ ಬದುಕು ತುಂಬಾ ಶೋಚನೀಯ ಸ್ಥಿತಿಯಲ್ಲಿತ್ತು. ಅನಕ್ಷರತೆ, ಲಂಚಾವತಾರ, ಶಿಕ್ಷಣ ಮಾಧ್ಯಮ, ಕನ್ನಡ ಭಾಷೆಯ ಸಂಧಿಗ್ದ ಪರಿಸ್ಥಿತಿ, ಸುರಕ್ಷಿತರ ಸ್ವೇಚ್ಛಾಚಾರ, ರಾಜಕೀಯ, ಅಸ್ಥಿರತೆ, ರಾಜಕಾರಣಿಗಳ ಲೂಟಿಗಾರಿಕೆ, ಮುಂತಾದವುಗಳನ್ನು ದಿನ ನಿತ್ಯದ ಬದುಕಿನಲ್ಲಿ ಕಾಣುತ್ತಿದ್ದ ಶಾಂತಪ್ಪನವರ ಕವಿ ಹೃದಯವು ಸಾಮಾಜಿಕ ಕಾಳಜಿಯಿಂದ ಮುಕ್ತವಾಗಿ ಕಾವ್ಯ ರಚಿಸಲು, ಸಾಧ್ಯವಿಲ್ಲವೆಂಬುದನ್ನು ಸತ್ಯವೂ ಅವರಿಗೆ ತಿಳಿದಿತ್ತು.

ವಾಸ್ತವು ಪ್ರಜ್ಞೆಯಿರುವ ಕವಿಯು ಸಮಕಾಲೀನ ಬದುಕಿನಲ್ಲಿ, ಸಮಾಜದಲ್ಲಿ ನಡೆಯುವ ಸಂಗತಿಗಳಿಗೆಲ್ಲಾ ಸ್ಪಂದಿಸಿದ ಸಂದರ್ಭಗಳಲ್ಲಿ ಮೂಡಿ ಬಂದ ಕಾವ್ಯ ಸಮಾಜದ ಕೈಗನ್ನಡಿಯಾಗಿ ನಿಲ್ಲುತ್ತದೆ. ಲೇಖಕರಾದವರು ಸಮಾಜದಿಂದ ಸ್ವಾತಂತ್ರ್ಯವನ್ನು ಬಯಸಿದರೆ, ಸಮಾಜವು ಅವರಿಂದ ಸಾಮಾಜಿಕ ಜವಾಬ್ದಾರಿಯನ್ನು ಬಯಸುತ್ತದೆ. "Creative Freedom for the writer Is inseparable from a sense of social responsibility[32]" ಎಂಬ ಮಾರ್ಕ್ಸ್ ಅಡಕಿಲ್‌ರ ಮಾತು ಇಲ್ಲಿ ಮುಖ್ಯವಾಗುತ್ತದೆ. ಹೀಗಾಗಿ ಈ ಅಂಶದ ಅಡಿಯಲ್ಲಿ ಸಾಮಾಜಿಕ ಸಮಸ್ಯೆಗಳು, ನಾಡು–ನುಡಿ–ಚಿಂತನೆ, ಸಾಮಾಜಿಕ ಸ್ಥಿತ್ಯಂತರದ ಪರಿಣಾಮಗಳು ಹೆಣ್ಣು ಮಕ್ಕಳ ಅಭಿವೃದ್ಧಿ, ಶಿಕ್ಷಣದ ಮಹತ್ವ ಮುಂತಾದ ಸಂಗತಿಗಳನ್ನು ಕುರಿತು ಚಿಂತಿಸಿದೆ. ಕವಿ ಹಾಗೂ ವಚನಗಳನ್ನು ಸಾಮಾಜಿಕ ಕಾಳಜಿ ಅಡಿಯಲ್ಲಿ ಅಧ್ಯಯನ ಮಾಡಲಾಗಿದೆ.

---

31 ದೇಶಾಂಶ ಬದುಕಿನ ಸುತ್ತ – ಪು–೩೧.

32 ಉದ್ಧೃತ ಬರಗೂರ ರಾಮಚಂದ್ರಪ್ಪ–ಸಾಹಿತ್ಯ ಮತ್ತು ರಾಜಕಾರಣ ೧೯೯೮–ಪು–೨೨.

ಸಾಮಾಜಿಕ ಸಮಸ್ಯೆಗಳಲ್ಲಿ ಪರಿಗಣಿಸಬಹುದು. ದೇಶಾಂಶರ ಕವನಗಳಲ್ಲಿ ಪಡೆದು ಸಾಕಿದ ತಾಯಿ ಇಂದಿನ ನಮ್ಮ ಕುಟುಂಬ ವ್ಯವಸ್ಥೆಯಲ್ಲಿಯ ವಾಸ್ತವ ಚಿತ್ರವನ್ನು ಬಿಚ್ಚಿಡುತ್ತದೆ. ಕೋಳಿನಾಸೆಗೆ ಬಿದ್ದನಾಯಿ, ಹಡೆದು ಸಾಕಿದ ತಾಯಿ ಎಂಬ ಮಾತಿನಲ್ಲಿ ವ್ಯಂಗ್ಯ ಹಾಗೂ ಸಮಸ್ಯೆಯ ಆಳವನ್ನು ಅದು ತೋರುತ್ತದೆ. ಅವರ ಸತಿ ಎಂಬ ಕವನದಲ್ಲಿ ಎದ್ದೇಳು ಎಲೆ ನಾರಿ, ಸುಡುವವರ ಎದೆ ಮೆಟ್ಟು, ಕುಡಿ ಅವರ ರಕುತವನು ಮಹಾ ಕಾಳಿಯಾಗಿ, ಬಾಗಿದರೆ ಒದೆಯುವರು, ಒದೆದರಡಿಗೆರಗುವರು ಒದೆ ಎಂದು ಹೇಳುವಲ್ಲಿ ಕವಿಗಿರುವ ಹೆಣ್ಣು ಮಕ್ಕಳ ಕಾಳಜಿ ಹಾಗೂ ಅವರಿಗಾಗುತ್ತಿರುವ ಅನ್ಯಾಯದ ವಿರುದ್ಧದ ಪ್ರತಿಭಟನೆಗಳನ್ನು ಏಕ ಕಾಲದಲ್ಲಿ ಕಾಣಬಹುದು. ಹಾಗೆಯೇ ಇಂದಿನ ಭ್ರಷ್ಟಾಚಾರದ ವ್ಯಾಪಕತೆಯನ್ನು ತೋರಿಸುವ ಅವರಂತಾಗಲೇ? ಕವನದ ಕೆಲವು ಸಾಲುಗಳು ಹೀಗಿವೆ.

ಅನೇಕ ಜನ ರಾವಣರು ಕೂಡಿ
ರಾಣಾಸುರನನ್ನು ಸುಡುತ್ತ
ಸಂಭ್ರಮಿಸುವುದನ್ನು ನೋಡಿ
ದೂರದಲ್ಲಿ ನಿಂತ ರಾಮನೊಬ್ಬ
ನಾನು ಅವರಂತಾಗಲೇ ಎಂದು ಹಾಗೆಯೇ
ವಾಮನಾವತಾರದ ವಿಷ್ಣುಪಾದ
ಕಲ್ಕ್ಯವತಾರದ
ಲಂಚಪಾದದ ವ್ಯಾಪ್ತಿಯೆದುರು
ನಾಚಿ, ಮೂಲೆ ಸೇರಿತು[೩೩].

ಇಲ್ಲಿ ಹೇಳಲಾಗಿರುವ ವಿಷಯದ ವಿವರಣೆಯು ಸಮರ್ಥವಾದ ದೃಷ್ಟಿತಗಳಿಂದ ಅಭಿವ್ಯಕ್ತಗೊಂಡಿದ್ದು, ನೈಜತೆಯನ್ನು ಬಿಚ್ಚಿ ತೋರಿಸುತ್ತವೆ. 'ಹೊಸ ವರುಷದ ಮುನ್ನ'ವು ಸಂಭ್ರಮ ಪಡೆದ ಸ್ಥಿತಿ ನಮ್ಮ ಬದುಕಿನಲ್ಲಿ ತುಂಬಿ ನಿಂತಿರುವುದನ್ನು ಕವಿ ಸೂಕ್ಷ್ಮವಾಗಿ ಗಮನಿಸಿದ್ದಾನೆ.

"ನವ ವರುಷ ನಗು ಎಂದರೂ ಅಳಬೇಕೆನ್ನುವ ಒತ್ತಾಸೆ
ಹಳೆವರುಷ ಅಳು ಎಂದರೂ ನಗಬೇಕೆಂಬ ಹಿರಿಯಾಸೆ[೩೪]"

---

[33] ದೇಶಾಂಶ ಬದುಕಿನ ಸುತ್ತ ಪು–೧೪

[34] ದೇಶಾಂಶ ಬದುಕಿನ ಸುತ್ತ ಪು–೧೮

ಎಂಬಲ್ಲಿಯ ಶ್ರೀ ಸಾಮಾನ್ಯ ಬದುಕಿನ ಕಷ್ಟ ಕೋಟಲೆಗಳ ವಾಸ್ತವ ಚಿತ್ರ ಕಾಣಸಿಗುತ್ತಿದ್ದು, ಅದರೊಂದಿಗೆ ಭವಿಷ್ಯದ ಬಗೆಗಿನ ಆಶಾದಾಯಕ ನಿಲವೂ ಪ್ರಕಟವಾಗಿದೆ.

'ದಿಗಂಬರ ಕರಿಬಸವೇಶ್ವರ' ಎಂದು ಅಂಕಿತನಾಮ ವಿವರಿಸಿಕೊಂಡು ರಚನೆಗೊಂಡಿರುವ ದೇಶಾಂಶರ ವಚನಗಳಲ್ಲಿ ಹಲವಾರು ಸಾಮಾಜಿಕ ಸಮಸ್ಯೆಗಳ ನಿರೂಪಣೆಯನ್ನು ಕಾಣಬಹುದು. ಅಂತಹ ಕಾರಣಗಳಲ್ಲಿ ಇಂದಿನ ಮಠ ಹಾಗೂ ಪೀಠಗಳೂ ಕಾರಣವೆನ್ನಬಹುದಾದನ್ನು ಕವಿಯ ಹೇಳಿಕೆಯಲ್ಲಿಯೇ ಗಮನಿಸಬಹುದು.

ಪೀಠ ಕಿರೀಟದ ಹಂಗಿನ ಸ್ವಾಮಿಗಳು
ಭೋಗ ವೈಭೋಗಗಳ ಹಂಗಿನ ಮಠಾಧಿಪತಿಗಳು
ಪಾಲಕಿ ಕಾರಿನ ಹಂಗಿನ ಜಗದ್ಗುರುಗಳು
ಕೀರ್ತಿ ವಾರ್ತೆಯ ಹಂಗಿನ ಆಚಾರ್ಯರು
ಹಲವು ಹಗರಣಗಳ ಮಂತ್ರಿ–ತಂತ್ರಿಗಳಿಗಿಂತ
ಕಂತ್ರಿಗಳೆಂಬ ದಿಗಂಬರ ಕರಿಬಸವೇಶ್ವರ[35].

ಮಠ ಪೀಠಗಳ ಓರೆ–ಕೋರೆಗಳ ರೀತಿ–ನೀತಿಗಳು ಇಂದಿನ ಜನಾಂಗವನ್ನು ಹೇಗೆ ಘಾಸಿಗೊಳಿಸುತ್ತವೆ ಎಂಬುದರ ನಿದರ್ಶನ ಈ ವಚನದಲ್ಲಿ ಕಾಣಸಿಗುತ್ತದೆ. ತಮ್ಮ ಸನ್ಮಾನವನ್ನು ತಾವೇ ಮಾಡಿಸಿಕೊಂಡು, ತಮ್ಮ ಸಮಾಧಿಯನ್ನು ತಾವೇ ಕಟ್ಟಿಸಿಕೊಳ್ಳುವ ಹಾಗೂ ತಮ್ಮ ಮೇಲೆ ತಾವೇ ಭಜನೆ ಹಾಡುಗಳನ್ನು ರಚಿಸಿಕೊಳ್ಳುವ ಮಠಾಧಿಪತಿಗಳನ್ನು ತರಾಟೆಗೆ ತೆಗೆದುಕೊಳ್ಳುವ ಕವಿಯು ಅತ್ತು ಕರೆದು ಅತ್ತೆ ಅನ್ನಿಸಿಕೊಳಳುವ ಚಾಳಿಯವರೆಂದು ಜರೆಯುತ್ತಾರೆ. ನಾಯಕ ನರಿಗಳಿಗೆ, ಅಧಿಕಾರಿ ಹದ್ದುಗಳಿಗೆ ಅವರನ್ನು ಹೋಲಿಸುತ್ತ ಇತ್ತೀಚೆಗೆ ಪೀಠದ ಕೋತಿಗಳೇ ಹೆಚ್ಚಾಗಿವೆ ಎಂದು ಖಂಡಿಸುತ್ತಾರೆ.

ಅಕ್ಕಪಕ್ಕದಲ್ಲಿಯ ಕುಟುಂಬಗಳಲ್ಲಿ ದಿನ ನಿತ್ಯ ನಡೆಯುವ ರಾದ್ಧಾಂತಗಳು ಸಹ ಕವಿಯ ಮನಸನ್ನು ಕೆಣಕಿನಿಂತಿವೆ.

'ಸುಳಿಗೇಡಿ ಅತ್ತೆ ಕಡಿಗೇಡಿ ಮಾವ
ಕುಂಚುಂಬ ಗಂಡ ಈ ಮೂವರು ಹೆಣ್ಣಿಗೆ
ಕಡು ವೈರಿಗಳೆಂದು[36]' ಅವರು ಹೇಳುವಲ್ಲಿ

---

[35] ದೇಶಾಂಶ – ದಿಗಂಬರ ವಚನಗಳು.

[36] ದೇಶಾಂಶ – ದಿಗಂಬರ ವಚನಗಳು.

ಅವರ ಕವನಗಳಲ್ಲಿಯ ಧೋರಣೆಯನ್ನು ಅರಿಯಬಹುದು. ಸರ್ವಜ್ಞ ಕವಿಯಂತೆ ಕಂಡದ್ದನ್ನು ಕಂಡಂತೆ ಹೇಳುವಲ್ಲಿ ಅವರಿಗೆ ಯಾವುದೇ ಹಿಂಜರಿಕೆಯಿಲ್ಲ. ಹಾಗೂ ಅವರೇನೆಂದು ಕೊಂಡಾರೆಂಬ ಹಂಗು ಈ ಶಾಂತಪ್ಪನವರಿಗಿಲ್ಲ[37]. ಎಂಬುದನ್ನು ಗಮನಿಸಬಹುದು. ಅವರು ಎತ್ತಿ ತೋರಿಸುವ 'ಸಾಮಾಜಿಕ ಕಳಕಳಿಯ ಅಡಿಯಲ್ಲಿ' ರಾಜಕೀಯ ವಿಡಂಬನೆಯೂ ತುಂಬಾ ಪ್ರಧಾನವಾಗಿರುವುದನ್ನು ಕಾಣಬಹುದು.

'ಕಳ್ಳ ಸಂಸ್ಕೃತಿಯ ಖದೀಮರು
ಕಾರಂಜಾ ಆಣೆಕಟ್ಟನ್ನು ಕಬಳಿಸಿದರು
ಕಾವೇರಿ ನೀರನ್ನು ಪೋಲು ಮಾಡಿದರು
ಕಾಡಾನೆ ಶ್ರೀ ಗಂಧದ ಖಲಾಸ ಮಾಡಿದರು
ಭಯೋತ್ಪಾದಕರಿಗೆ ಬೆಂಬಲವಾಗಿ ನಿಂತರು
ಪ್ರಜಾಪ್ರಭುತ್ವ ಭಾರತದಲ್ಲಿ
ಕಳ್ಳರಿಗೆ ಕಳ್ಳರು ಕೈಕೋಳ ತೊಡಿಸಿದ್ದುಂಟೇ
ದಿಗಂಬರ ಕರಿಬಸವೇಶ್ವರ[38]'

ಇಂದಿನ ಪ್ರಜಾಪ್ರಭುತ್ವ ಪದ್ಧತಿಯಲ್ಲಿಯ ಪ್ರಭುತ್ವದ ರಾಜಕೀಯ ಬಿಸಿ ದೇಶಾಂಶ ಅವರನ್ನು ಸೊಂಕದೇ ಬಿಟ್ಟಿಲ್ಲ. ರಾಜಕಾರಣಿಗಳ ಸ್ವಾರ್ಥಲಾಲಸೆ, ಸ್ವಜನ ಪಕ್ಷಪಾತ ಹಾಗೂ ಗೋಸುಂಬೆತನಗಳು ಎಂಥವರನ್ನೂ ಕೆಣಕದೇ ಇರಲಾರವು. ಅದಕ್ಕೆ ಪ್ರತಿ ರೋಧತನ ಕವಿಯಲ್ಲಿ ಕಾಣಿಸಿದೆ. ವಿಡಂಬನಾತ್ಮಕವಾಗಿರುವ ಅವರ ವಚನಗಳು ನೇರವಾಗಿ ಎದೆಚುಚ್ಚಿ ಮಾತನಾಡಿಸುವ ರೀತಿಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಇಂದಿನ ಸಮಾಜದಲ್ಲಿ ತುಂಬಿ ತುಳುಕುತ್ತಿರುವ ಅಳಿಯಂದಿರ ಕುರಿತ ಚಿಂತನೆಗಳೂ ಸಹ ಸಾಕಷ್ಟು ಸವಾಲೆಸೆಯುತ್ತದೆ.

'ಚೇಳು ಕಡಿದರೆ ಪರಿಹಾರವಿದೆ
ಹಾವು ಹರಿದರೆ ಮದ್ದು ಇದೆ
ಹುಚ್ಚು ನಾಯಿ ಕಚ್ಚಿದರೆ ಚುಚ್ಚು ಮದ್ದು ಇದೆ
ಹುಂಬ ಅಳಿಯನ ಹಟಮಾರಿತನಕ್ಕೆ ಮದ್ದಿಲ್ಲೆಂದು
ದಿಗಂಬರ ಕರಿಬಸವೇಶ್ವರ[39]'

ತಳಿಮನದವನು ಅಳಿಯನಾದರೆ ಅತ್ತೆ–ಮಾವರಿಗೆ ಉಳಿಗಾಲವಿಲ್ಲ. ಹಾಗೂ ಕೈಹಿಡಿದವಳಿಗೆ ಕೊನೆಗಾಲವೇ ಆದಂತೆ. ಕೋರ್ಟು ಕಚೇರಿಗಳಿಗೆ

---

[37] ಡಿ. ಮಹಾದೇವಪ್ಪಾ–ದಿಗಂಬರ ವಚನಗಳು ಮುನ್ನುಡಿಯಲ್ಲಿ IX.

[38] ದೇಶಾಂಶ – ದಿಗಂಬರ ವಚನಗಳು ಮುನ್ನುಡಿಯಲ್ಲಿ IX..

[39] ದೇಶಾಂಶ – ದಿಗಂಬರ ವಚನಗಳು ಪುಟ–೭೩.

ಪರ್ವಕಾಲವಾಗುತ್ತದೆ ಎನ್ನುವ ಕವಿಯೂ ತನ್ನ ತಿಳಿಯನಿಂದಲೇ ಅನೇಕ ತೊಂದರೆ ಎದುರಿಸಿದ್ದಾರೆ. ಅಳಿಯ ಹಾಗೂ ಆತನ ತಂದೆ ತಾಯಿಗಳ ಕಾಟ ಸಹಿ ಅಸಾಧ್ಯವೆಂಬುದನ್ನು–

'ಬೀಗತಿ ಹುತ್ತವಾದಳು ಬೀಗ ನಾಗರವಾದ
ಅಳಿಯ ಮಿಡಿ ನಾಗರವಾದ
ಕಗಳ ಕಾವ ನೀನು ಮೂಕನಾದೆ
ಯಾರಿಗೆ ದೂರಲಿ ಹೇಳಾ ದಿಗಂಬರ ಕರಿಬಸವೇಶ್ವರ[40]'

ಎಂದು ಹೃದಯ ತುಂಬಿ ನೋವು ತೋಡಿಕೊಳಳುತ್ತಾರೆ. ಅಳಿಯರ ದಿರ ಉಪಟಳದಿಂದ ನೊಂದು ಬೆರದಿರುವ ಕವಿಯ ಹೃದಯವು ಆನೋವನ್ನು ಇಲ್ಲಿ ಸಾರ್ವತ್ರೀಕರಿಸಿ ಹೆಣ್ಣು ಪಡೆದವರೆಲ್ಲರ ಎದಯಾಳುವನ್ನಿಲ್ಲಿ ತೋಡಿದ್ದಾರೆ. ಹೆಣ್ಣೇ ಹೆಣ್ಣಿನ ವೈರಿಯಂಬುದನ್ನು ಇವರ ಅನೇಕ ವಚನಗಳಲ್ಲಿ ಗುರುತಿಸಬಹುದು.

ಹೆಣ್ಣಿನ ಧರ್ಮರಣಕ್ಕೆ
ಮನೆಯ ಹಿರಿಯರು ಮೊದಲ ಕಾರಣ
ಗಂಡಿನ ದುರಾಶೆ ದುರಹಂಕಾರ ಎರಡನೆಯ ಕಾರಣ
ಹೆಣ್ಣಿಗೆ ಹೆಣ್ಣೇ ವೈರಿ ಮೂರನೇ ಕಾರಣ
ದುಷ್ಟ ಸಾಮಾಜಿಕ ರೂಢಿ ನಾಲ್ಕನೆಯ ಕಾರಣ
ತಿದ್ದಲಾರದ ಧರ್ಮಾಧಿಕಾರಿಗಳು ಐದನೇ ಕಾರಣ
ಕಪಟ ನಾಟಕ ಸೂತ್ರಧಾರಿಯಾದ ನೀನು
ಮುಖ್ಯ ಕಾರಣವೆಂದ ದಿಗಂಬರ ಕರಿಬಸವೇಶ್ವರ[41].

ಹೆಣ್ಣಿನ ದುರ್ಮರಣಕ್ಕೆ ಕಾರಣವಾಗುವ ಆರರಲ್ಲಿ ಮೂರನೆಯ ಸ್ಥಾನ ಹೆಣ್ಣಿಗೆ ನೀಡಿದ್ದಾರೆ ಕವಿ. ಯಾಕಂದರೆ ಬದುಕಿನ ಕೌಟುಂಬಿಕ ಜೀವನದಲ್ಲಿ ಅತ್ತಿಗೆ ನಾರಿ, ನಾದಿನಿ ನಾರಿ, ಆದರೆ ಒಬ್ಬರಗೊಬ್ಬರು ಹಾವು–ಮುಂಗಲಿ ವೈರಿ, ಈ ಸಜಾತಿಯ ಧ್ರುವಗಳು ಎಂದೂ ಕೂಡುವುದಿಲ್ಲ. ಹೆಣ್ಣು ಹೆಣ್ಣಿಗೆ ಕಾಡುತ್ತಿದೆ, ಪೀಡಿಸುತ್ತಿದೆ. ಹೆಣ್ಣು ಕೊಡಲಿಯ ಕಾವಾಗಿ, ಗಂಡಿನ ಕೈಯ ಅಸ್ತ್ರವಾಗಿದೆ, ಹೆಣ್ಣು ಎಚ್ಚರಾದರೆ ಮಾತ್ರ ಗಂಡಿನ ಸೊಕ್ಕು ಮಲಗುವುದೆಂದು ಕವಿ ತಿಳಿಸುತ್ತಾರೆ[42]. ಕೌಟುಂಬಿಕ ಕಲಹಗಳಲ್ಲಿ ಅತ್ತೆ–ಸೊಸೆ–ಅತ್ತಿಗೆ–ನಾದಿನಿ–ನೆಗಣ್ಣಿಯರು ಹೇಗೆ

---

[40] ದೇಶಾಂಶ – ದಿಗಂಬರ ವಚನಗಳು ಪುಟ–೨೭.

[41] ದೇಶಾಂಶ – ದಿಗಂಬರ ವಚನಗಳು ಪುಟ–೨೦.

[42] ದೇಶಾಂಶ – ದಿಗಂಬರ ವಚನಗಳು ಪುಟ–೯೭.

ಕುಲಘಾತಕಿಯರಾಗುತ್ತಾರೆಂಬುದನ್ನು ಕವಿಯು ಹಲವು ವಚನಗಳಲ್ಲಿ ತಿಳಿಸುತ್ತಾ ಹೆಣ್ಣು ಸುಖ ಜೀವನದ ತಾಯಿ ಹೇಗಾಗುತ್ತಾಳೆ? ಎಂಬುದನ್ನು ಪ್ರಶ್ನಿಸುತ್ತಾರೆ. ಇಂತಹ ಸಮಾಜದ ಸ್ಥಿತ್ಯಂತರಗಳಿಗೆ ಕಾರಣವಾಗಬಹುದಾದ ಅನೇಕ ವಿಷಯಗಳು ದೇಶಾಂಶರ ಕವನ ಹಾಗೂ ವಚನಗಳಲ್ಲಿ ಅಭಿವ್ಯಕ್ತಗೊಂಡಿವೆ.

ಇಂದು ಬೀದರ ಜಿಲ್ಲೆಯಲ್ಲಿ ಅತ್ಯಂತ ಭರಾಟೆಯಿಂದ ಪ್ರಚಾರಕ್ಕೆ ಬರುತ್ತಿರುವ ಧರ್ಮ ತತ್ವಗಳಲ್ಲಿ ಬಸವತತ್ವವೂ ಒಂದು. ಹಿಂದೊಮ್ಮೆ ೧೨ ನೆಯ ಶತಮಾನದಲ್ಲಿ ಹೊತ್ತಿ ಉರಿಯುತ್ತಿದ್ದ ಸಮಾಜದಲ್ಲಿಯ ವರ್ಗ, ವರ್ಣ, ಲಿಂಗಭೇದ, ಅಸಮಾನತೆ, ಆಲಸ್ಯತನ, ಮತ್ತು ಜಾತಿಭೇದವನ್ನು ನಂದಿಸಲು ಹಗಲಿರುಳೂ ಶ್ರಮಿಸಿದವರು ಬಸವಾಧಿ ಶರಣರು. ಅವರ ನಾಯಕನ ಹೆಸರಿನಲ್ಲಿ ಗುರುತಿಸಲಾಗುತ್ತಿರುವ ಶರಣರ ತತ್ವಗಳು ಇಂದು ಕೇವಲ, ಭಾಷಣ ವಚನ, ಪ್ರವಚನಗಳಿಗಾಗಿ ಮಾತ್ರ ಸೀಮಿತವಾಗಿರುವುದು ದುರ್ದೈವದ ಸಂಗತಿ. ಅದನ್ನು ಅರಿತಿರುವ ದೇಶಾಂಶ ಹುಡಗಿಯವರು.

'ಬಸವ ತತ್ವ–ಭಾಷಣಗಳಿಂದ ಬಾಳದು
ವಚನ–ವಾಚನ–ಪ್ರವಚನಗಳಿಂದ ಬಾಳದು
ಧ್ಯಾನ–ಮೌನಗಳಿಂದ ಬಾಳದು
ಅದು ತ್ಯಾಗ–ಬಲಿದಾನಗಳಿಂದ ಬಾಳುವುದೆಂದು
ದಿಗಂಬರ ಕರಿಬಸವೇಶ್ವರ[43]'

ಎಂದು ಹೇಳುವ ಮೂಲಕ ಅದನ್ನು ಉಳಿಸಿ ಬೆಳೆಸುವ ಬಗೆ ತಿಳಿಸುತ್ತಾರೆ. ಆ ಶರಣರು ಸಾರಿದ ತತ್ವಗಳನ್ನು.

ಕಾಯಕವೇ ಲಿಂಗ, ಬೆವರೇ ಮಜ್ಜನ
ಧೂಳಿಯೇ ಭಸ್ಮ, ದಿಗಂಬರ ಕರಿಬಸವೇಶ್ವರನ ನೆನಹೇ
ಪೂಜೆ, ಪ್ರಸಾದ, ದಾಸೋಹವೆಂದೂ[44].

ತಿಳಿಸುತ್ತಾರೆ. ಬಸವತತ್ವವು ಬಾಯಿಯಿಂದ ಹೇಳುವುದಲ್ಲ, ನಡೆ–ನುಡಿಯಲ್ಲಿ ಆಚರಿಸುವುದು ಎಂಬುದರ ತಾತ್ಪರ್ಯವನ್ನು ಮೇಲಿನ ವಚನದಲ್ಲಿ ಗುರುತಿಸಬಹುದಾಗಿದೆ. ಶರಣರ ವಚನಗಳು ಓದಿನಲ್ಲಿ ಸರಳವಾಗಿರಬಹುದು, ಬೋಧನೆಯಲ್ಲಿ ಸರಳವಾಗಿರಬಹುದು, ಆದರೆ ಅವುಗಳ ಪಾಲನೆ ಕಷ್ಟ ಸಾಧ್ಯವೆಂಬುದನ್ನು ಬಹಿರಂಗಪಡಿಸುತ್ತಾರೆ. ಶರಣರು ಊದಬತ್ತಿ ದೂಪಾರತಿಯಲ್ಲ,

---

[43] ದೇಶಾಂಶ – ದಿಗಂಬರ ವಚನಗಳು ಪುಟ–೩೬.

[44] ದೇಶಾಂಶ – ದಿಗಂಬರ ವಚನಗಳು ಪುಟ–೦೯.

ಕರ್ಪೂರಾರತಿ, ಕಸ್ತೂರಿ ಶ್ರೀಗಂಧವೂ ಅಲ್ಲ, ಅವರು ಇದ್ದೂ ಇಲ್ಲದಂತಿರುವ ಎಲ್ಲರೆದೆಯ ಪ್ರಾಣವಾಯು[45]. ಆ ಶರಣರೇ ವಚನಕಾರರು, ಇಂಥ ನಿಜ ವಚನಕಾರರಾಗುವುದು ಹೇಗೆ? ಎಂಬುದನ್ನು

ವಚನ ವಾಚನ ಸರಳ! ವಚನ ಬೋಧನ ಸರಳ
ವಚನ ಚಿಂತನ ಸರಳ! ವಚನ ಪಾಲನ ಕಠಿಣಾಳಿ ಕಠಿಣ.
ವಚನ ನಿಭಾಯಿಸುವವರೇ ವಚನಕಾರರೆಂದು
ದಿಗಂಬರ ಕಠಿಬಸವೇಶ್ವರ[46].

ಎಂದು ಕವಿಯು ಹೇಳುವಲ್ಲಿ ಶ್ರೀ ಶಾಂತಪ್ಪನವರು ವಚನಗಳನ್ನು ಕೇವಲ ಸಾಹಿತ್ಯ ಪ್ರಕಾರವೆಂದಾಗಲಿ, ಬೋಧನೆಯ ವಿಷಯವೆಂದಾಗಲಿ, ಚಿಂತನೆಯ ಸಂಗತಿಗಳೆಂದಾಗಲಿ ಸ್ವೀಕರಿಸಿಲ್ಲ. ಆ ಶರಣರ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಮುನ್ನಡೆದಿದ್ದಾರೆಂಬುದನ್ನು ತಿಳಿಯಬಹುದು. ಈ ರೀತಿ ವಚನ ಹಾಗೂ ಹಾಡುಗಳ ಮೂಲಕ ಸಮಾಜದ ಆಗು ಹೋಗುಗಳನ್ನು ಟೀಕಿಸುವ ಹಾಗೂ ರಾಜಕಾರಣವನ್ನು ವಿಡಂಬಿಸುವವರ ನಡೆ–ನುಡಿಗಳನ್ನು ನೇರ್ಪುಗೊಂಡಿರ ಬೇಕೆಂಬುದನ್ನು ತಿಳಿದವರು ಅಷ್ಟೇ ಅಲ್ಲ. ಅದರಂತೆ ತಮ್ಮ ನಡೆ– ನುಡಿಗಳನ್ನು ಇರಿಸಿಕೊಂಡು ಬಾಳುತ್ತಿರುವವರು ದೇಶಾಂಶರಾಗಿದ್ದಾರೆಂದು ನಾವು ಭಾವಿಸಬಹುದು. ಅದಕ್ಕಾಗಿಯೇ ವಿಮರ್ಶಕರೊಬ್ಬರು 'ನಿಮ್ಮ ಬದುಕಿಗೆ ಹಿಡಿದ ರನ್ನ ಗನ್ನಡಿ ನಿಮ್ಮೀ ಕವನ ಸಂಕಲನವೆಂದು ಹೇಳಿದ್ದಾರೆ[47],

ಒಟ್ಟಿನಲ್ಲಿ ಇಂದಿನ ಯಜಮಾನ ಸಂಸ್ಕೃತಿಯ ಸೋಗಲಾಡಿತನ, ಶತಮಾನಗಳಿಂದ ನಡೆದ ಶೋಷಣೆ, ಸಾಮಾಜಿಕ ಅಸಮಾನತೆ, ಅಳಿಯರ ಕಾಟ, ಸಾಮಾಜಿಕ ಸ್ಥಿತ್ಯಂತರ ಮೊದಲಾದವುಗಳ ಇಂದಿನ ಕವಿಗಳನ್ನು ಕಾಡಿದಂತೆ, ದೇಶಾಂಶರ ಮನಸ್ಸನ್ನು ಈ ಸಂದರ್ಭಗಳು ಕಾಡಿವೆ ಎನ್ನಬಹುದು.

---

45 ದೇಶಾಂಶ – ದಿಗಂಬರ ವಚನಗಳು ಪುಟ–೨೯.

46 ದೇಶಾಂಶ – ದಿಗಂಬರ ವಚನಗಳು ಪುಟ–೫೭.

47 ಡಿ.ಕೆ. ಪಾಟೀಲ – ಬದುಕಿನ ಸುತ್ತ–ಕವನ ಸಂಕಲನದ ಅಭಿಪ್ರಾಯದಲ್ಲಿ ಪು–೫೦.

### ೧-೩. ಜೀವನ ಮೌಲ್ಯಗಳು:

ಜೀವನವೆಂಬುದು ಹುಟ್ಟು ಸಾವಿನ ಮಧ್ಯೆ ಬಾಳುವ ಸ್ಥಿತಿ. ಇದಕ್ಕೆ ನಿಜವಾಗಿಯೂ ಯಾವುದೇ ತರದ ಬಂಧನವಿಲ್ಲ. ಅವರವರ ಲೆಕ್ಕಾಚಾರದಂತೆ ಅವರನ್ನು ಬದುಕಿನಲ್ಲಿ ಸಾಗಬಹುದು. ಇಂಥ ಜೀವನದ ಗತಿ ಬಿಂಬವಾಗಿ ಬರುವ ಸಾಹಿತ್ಯವು ಮನುಷ್ಯ ಅನುಭವಗಳಿಗೆ ಭಾಷೆಯ ಆಕಾರ ನೀಡಿದ ಒಂದು ಕ್ರಮವಾಗಿದೆ. ಇಂಥ ಅನುಭವವನ್ನು ಭಾಷೆಯಲ್ಲಿ ಕಟ್ಟುವ ಕವಿಯೂ ತನ್ನದೇ ಆದ ಒಂದು ವ್ಯಕ್ತಿ ವೈಶಿಷ್ಟ್ಯತೆಯನ್ನು ಹೊಂದಿ ನಿಂತು ಇತರರಿಗಿಂತ ಭಿನ್ನನಾಗಿರುತ್ತಾನೆ. ಆ ಭಿನ್ನತೆಯಲ್ಲಿ ತನ್ನದೇ ಆಗಿರುವ ಕೆಲವು ಜೀವನ ಮೌಲ್ಯಗಳನ್ನು ಅಳವಡಿಸಿಕೊಂಡು ನಡೆದಿರುತ್ತಾನೆ. ಹೀಗಾಗಿ ಆತನು ಬದ್ಧನಾಗಿರುವ ಈ ಜೀವನ ಮೌಲ್ಯಗಳಾವುವು ಎಂಬುದನ್ನು ನಾವಿಲ್ಲಿ ಪರಿಶೀಲಿಸಬೇಕಾಗಿರುವುದರಿಂದ ದೇಶಾಂಶರ ಕಾವ್ಯಗಳ ಹಿನ್ನೆಲೆಯಲ್ಲಿ ನಾವಿದನ್ನು ಪರಿಶೀಲಿಸಿ ನೋಡಬಹುದು.

ಸಾಹಿತ್ಯ ಜೀವನದ ಅಭಿವ್ಯಕ್ತಿ ಎಂಬ ಹೇಳಿಕೆಯೊಂದಿದೆ. ಮ್ಯಾಥ್ಯೂ ಅರ್ನಾಲ್ಡರ ಬಹುಚರ್ಚಿತ ಸಾಹಿತ್ಯ ವಾಕ್ಯವೆಂದರೆ ಸಾಹಿತ್ಯವೆಂಬುದು ಜೀವನ ವಿಮರ್ಶೆಯಾಗಿದೆ. ಹೀಗಾಗಿ ಅದು ಒಂದು ಸಮಾಜದ ಇಡೀ ಸ್ವಭಾವವನ್ನು ಬಿಚ್ಚಿಡುತ್ತದೆ ಹಾಗೂ ಕವಿಯು ನಂಬಿದ ಜೀವನರಸವು ಅವನ ಮೈಯಲ್ಲಿ ಹರಿದಾಡಿದಂತೆ. ಆತನ ಸಾಹಿತ್ಯ ಸಂಸ್ಕಾರದ ಮೊದಲು ಹೆಜ್ಜೆಯೂ ಅದೇ ಆಗಿರುತ್ತದೆ.

ಸಾಮಾನ್ಯರು ಜೀವನವನ್ನು ನೋಡುವ ದೃಷ್ಟಿಗಳು ಕವಿಯಾದವನು ಜೀವನವನ್ನು ನೋಡುವ ದೃಷ್ಟಿಗೂ ವ್ಯತ್ಯಾಸವಿದೆ. ಸಾಮಾನ್ಯರಲ್ಲಿ ವ್ಯಥೆ ವ್ಯಥೆಯಾಗಿ, ಪಾಡು ಪಾಡಾಗಿಯೇ ಉಳಿದರೆ, ಕವಿಯಲ್ಲಿ ವ್ಯಥೆ ಕಥೆಯಾಗಿ, ಪಾಡು ಹಾಡಾಗಿ ಪರಿವರ್ತನೆಗೊಂಡು ಆನಂದದಾಯಕವಾಗುತ್ತದೆ ಎಂದು ಚಿಂತಕರು ಹೇಳಿರುವಂತೆ[48], ನಾವು ದೇಶಾಂಶರ ಸಾಹಿತ್ಯವನ್ನು ಅಧ್ಯಯನ ಮಾಡಿ ನೋಡಿದರೆ ಅವರದು ಉತ್ತಮ್ಮ ಬದುಕು ಎನಿಸುತ್ತದೆ.

ದೇಶಾಂಶ ಹುಡಗಿಯವರ ಸಾಹಿತ್ಯದಲ್ಲಿ ಉತ್ತಮ ಜೀವನವನ್ನು ಕಟ್ಟುಕೊಳ್ಳುವ ಪ್ರಾಮಾಣೀಕತೆಯೇ, ಅಭಿವ್ಯಕ್ತಿಯಾಗಿ ಮಾಡಿದ್ದು, ಸ್ಪಷ್ಟವಾಗುತ್ತದೆ. ಉತ್ತಮ ಬದುಕಿಗೆ ಮೊದಲು ಬೇಕಾದದ್ದು, ಅಕ್ಷರ ಜ್ಞಾನ ವೆಂಬುದು ಅವರ ಅನಿಸಿಕೆ. ಗ್ರಾಮೀಣ ಪರಿಸರದಲ್ಲಿ ಹುಟ್ಟಿ ಬೆಳೆದು ಬದುಕನ್ನೆಲ್ಲ ಅಲ್ಲೇ ಕಳೆದ

---

[48] ಜಿ.ಎಸ್. ಶಿವರುದ್ರಪ್ಪ-ಪ್ರಬುದ್ಧ ಕರ್ನಾಟಕ-ಪು ೩೮.

ದೇಶಾಂಶರಿಗೆ ಗ್ರಾಮೀಣ ಬದುಕು ಚೈತನ್ಯದ ಚಿಲುಮೆಯಾಗಿದೆ. ಅದೇ ಅವರ ಉಸಿರೂ ಹೌದು. ಆ ಗ್ರಾಮೀಣ ಬದುಕು ಸುಂದರಗೊಳ್ಳುಲ್ಲು ಎಲ್ಲ ಗ್ರಾಮವಾಸಿಗಳು ಅಕ್ಷರಸ್ಥರಾಗಬೇಕು. ಅದರಲ್ಲೂ ಹೆಣ್ಣು ಮಕ್ಕಳಿಗೆ ಸಾಕ್ಷರತೆ ಅತೀ ಅವಶ್ಯವೆಂದು ನಂಬಿದವರು. ಅದಕ್ಕಾಗಿಯೇ ಅಕ್ಷರ ಜ್ಯೋತಿ ಕವನ ಸಂಕಲನ ಹೊರತಂದರು. ವಯಸ್ಕರ ಶಿಕ್ಷಣ, ಸಾಕ್ಷರತೆಯಲ್ಲಿ ಕೆಲಸ ಮಾಡಿರುವ ಇವರು ಅಲ್ಲಿಯ ಬೋಧಕಿಯರಿಗೆ, ಅಂಗನವಾಡಿ ಮಹಿಳೆಯರಿಗೆ ದಾರಿ ದೀಪವಾಗಿದ್ದರು. ಸಾಕ್ಷರತೆಯ ಜ್ಯೋತಿ ಮನ- ಮನಕ್ಕೂ ಬೆಳಗಲು ಟೊಂಕ ಕಟ್ಟಿ ನಿಂತವರು. ಅಷ್ಟೇ ಅಲ್ಲದೇ ಜಾನಪದ ಸಾಹಿತ್ಯ ಇವರ ಬದುಕಿನಲ್ಲಿ ಹಾಸು ಹೊಕ್ಕಾಗಿ ಬೆರೆತಿರುವುದರಿಂದ ತಮ್ಮ ಹೃದಯ ಶ್ರೀಮಂತಿಕೆಯೊಂದಿಗೆ ಈ ನಿಟ್ಟಿನಲ್ಲಿ ಮಾನವೀಯತೆಯನ್ನು ಮೆರೆದರು. ಹೀಗಾಗಿ ಅವರ ಅಕ್ಷರ ಜ್ಯೋತಿ ಕಾಳಜಿಯನ್ನು ಕಾಣಬಹುದು.

ಉತ್ತಮ ಸಾಹಿತ್ಯ ಹೇಗಿರಬೇಕೆಂಬ ಪ್ರಶ್ನೆಗೆ ಅವರು ತಮ್ಮ ಕಲೆ ಎಂಬ ಕವನದಲ್ಲಿ.

> ‘ಕಲೆ, ಚಿತ್ರಕಲೆ
> ನೀ ಕಲಾಕಾರ ಬೀಸಿದ ಭಾವನೆಗಳ ಬಲೆ
> ಭಾವುಕರ ಎದೆಯಲಿ ಭಾವನೆಗಳ ಅಲೆ
> ನೋಡಿದವರೆಲ್ಲ ನೋಡ ನೋಡುತ್ತ ಆಗುವರು ಶಿಲೆ
> ಅವರಿಗರಿವಿಲ್ಲದಂತೆ ಬಾಗುವುದು ನಿನಗವರ ತಲೆ
> ಬಿಗಿದು ಕಟ್ಟಿದುದಿಲ್ಲ ಅವರಿಗೀ ನಿನ್ನ ಬಲೆ
> ಆದರೂ ಕಟ್ಟಿಟ್ಟದವರಂತೆ ನಿಂತಿರುತ್ತಾರಲ್ಲ[೪೯]’

ಎಂದು ಹೇಳುತ್ತಾರೆ. ಯಾವುದು ಮನುಷ್ಯನ ಮನಸ್ಸಿನ ಸಂಸ್ಕಾರಗಳನ್ನು ಉತ್ತಮಗೊಳಿಸುತ್ತ, ಅವರ ಭಾವರಾಗಗಳನ್ನು ಸಂಸ್ಕರಿಸುತ್ತಾ ಅವನನ್ನು ಹೆಚ್ಚು ಹೆಚ್ಚು ಸಮಾಜ ಜೀವಿ, ಸಂಘ ಜೀವಿ, ಮಾನವತಾ ಪ್ರೇಮಿಯನ್ನಾಗಿ ಮಾಡಬಲ್ಲದೋ ಅದೇ ಉತ್ತಮ ಸಾಹಿತ್ಯ (ಕಲೆ) ಎಂದು ನಾನು ಭಾವಿಸುತ್ತೇನೆ. ಸಾಹಿತ್ಯ ಒಂದು ಪುರುಷಮಣಿ ಉತ್ತಮ ಸಾಹಿತ್ಯದ ಸೃಷ್ಟಿ ವ್ಯಕ್ತಿಯ ಅನುಭವ ಮಾತ್ರವಲ್ಲ. ಯುಗದ ಜಗದ ಕನಸುಗಳ ಕೆನೆಯಾಗಿ ಬರುತ್ತದೆ[೫೦]. ಎಂಬ ಮಾತಿನ

---

49 ದೇಶಾಂಶ–ಬದುಕಿನ ಸುತ್ತ–ಕಲೆ–ಪು–೧೮.

50 ಹೆಚ್. ತಿಪ್ಪೇರುದ್ರ ಸ್ವಾಮಿ–ಶರಣರ ಅನುಭಾವ ಸಾಹಿತ್ಯ –೧೯೬೮–ಪು–೨೦೦.

ಸಾರಾಂಶದಂತಿದೆ. ದೇಶಾಂಶರ ಮೇಲಿನ ಕವನ ಈ ಕವಿಯ ಸಾಹಿತ್ಯದಲ್ಲಿ ಉಳಿದ ತತ್ವಗಳಿಗಿಂತ ಜೀವನ ತತ್ವೇ ಮುಖ್ಯವೆಂಬುದನ್ನು ಎಲ್ಲಾ ಕವನ ಹಾಗೂ ಅವರ ದಿಗಂಬರ ವಚನಗಳಲ್ಲಿ ಕಾಣಬಹುದಾಗಿದೆ.

'ಬರಹಕ್ಕಿಂತ ಬದುಕು ಬಲುದೊಡ್ಡದು' ಎಂಬ ನೀತಿಯಲ್ಲಿಯೇ ಬಾಳಿದ್ದಾರೆ. ದೇಶಾಂಶ ಹುಡಗಿಯವರು ಬಾಲ್ಯದಿಂದಲೂ ತಂದೆಯವ ವಚನ–ಪ್ರವಚನದ ಪ್ರಭಾವ, ತಾಯಿಯವರ ಜಾನಪದ ಹಾಡುಗಳು, ಊರಿನಲ್ಲಿಯ ಪರಿಸರದಲ್ಲಿಯ ಭಜನೆ ಹಾಡು, ಭಕ್ತಿ ತತ್ವ ಸಿದ್ಧಾಂತ, ಶರಣಧರ್ಮ, ವಚನ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ಬೆಳೆದವರು. ಇವೆಲ್ಲವುಗಳಿಂದ ಪ್ರಭಾವಿತರಾಗಿ ಬದುಕಿನಲ್ಲಿ ಆ ನಡೆ – ನುಡಿಗಳನ್ನು ಬೆಳಸಿಕೊಂಡವರು. ಅವರು ಆ ಹಿನ್ನೆಲೆಯಲ್ಲಿ ಆಧ್ಯಾತ್ಮವಾದಿ ವಿಶ್ವವಿಭೂತಿ ಮಹಾತ್ಮಾ ಬಸವೇಶ್ವರ ಎಂಬ ಮೂಲ ಹಿಂದೀಯಲ್ಲಿ ರಚಿಸಿದ ಡಾ. ಭಗವಾನದಾಸ ತಿವಾರಿ ಯವರ ಕೃತಿಯನ್ನು ಕನ್ನಡ ಸೊಗಸಾಗಿ ಅನುವಾದಿಸಿಕೊಟ್ಟಿದ್ದಾರೆ. 'ಬಸವೇಶ್ವರರು ಭಾರತದ ಮೊಟ್ಟ ಮೊದಲ ಸ್ವತಂತ್ರ ವಿಚಾರವಾದಿ ಮತ್ತು ಲೋಕಕಲ್ಯಾಣ ಸಾಧಿಸುವ ಪ್ರತಿಭಾವಂತ ಮಹಾ ಪುರುಷರಿದ್ದರು'. ಹಳೆಯದಾದ ಮತ್ತು ಕೊಳೆತು ಭರ್ಜರಿತವಾದ ರೂಢಿಗಳ ವಿರುದ್ಧ ಬಂಡಾಯ ಧ್ವಜವನ್ನು ಹಾರಿಸಿದ ಪ್ರಥಮ ಸಮಾಜ ಸುಧಾರಕರಾಗಿದ್ದರು"[೫೧]. ಇಂಥ ಮಹಾಮಾನವತಾವಾದಿಯನ್ನು ಕುರಿತು ಆಳವಾದ ಅಧ್ಯಯನ ಮಾಡಿರುವ ದೇಶಾಂಶರು ತುಂಬಾ ಸಂಶೋಧನಾತ್ಮಕವಾದ ನೆಲೆಯಲ್ಲಿಯೇ ಅದನ್ನು ಅನುವಾದಿಸಿದ್ದಾರೆ. ಹೀಗಾಗಿ ವಚನ ಜೀವನ ಇವರ ಜೀವನದಲ್ಲಿ ಹಾಸು ಹೊಕ್ಕಾಗಿ ಪರಿಣಮಿಸಿದ್ದರಿಂದ ಅವರು 'ವಚನಗಳ' ರಚನೆಗೂ ಕೈಹಾಕಿ 'ದಿಗಂಬರ ವಚನಗಳು' ಎಂಬ ಕೃತಿ ಪ್ರಕಟಿಸಿದ್ದಾರೆ.

ಅವರ ದಿಗಂಬರ ಕರಿಬಸವೇಶ್ವರಾ ಎಂಬುದು ಹೊಸತನದ ಅನ್ವೇಷಣೆ. ಈ ಅಂಕಿತನಾಮವು ದೇಶಾಂಶರು ತಮ್ಮ ಇಷ್ಟಲಿಂಗಕ್ಕೆ ಅವರೇ ಕೊಟ್ಟಿರುವ ಹೆಸರು. ಇದು ಗುಡಿಯಲ್ಲಿ ಇರುವ ಸ್ಥಾವರ ಮೂರ್ತಿಯಲ್ಲ. ಈ ಸಂಕಲನಕ್ಕೆ ದಿಗಂಬರ ವಚನಗಳು ಎಂದು ಹೆಸರಿಟ್ಟು, ಜೋಗುಳ ಹಾಡಿದವರು ಪ್ರೊ. ಬಿ. ಮಹಾದೇವಪ್ಪನವರು"[೫೨]. ಎಂದು ಕವಿಯೇ ಹೇಳಿದ್ದಾರೆ. ಹುಡಗಿಯವರ ನೇರ ಮತ್ತು ನಿಷ್ಠುರ ಮಾತುಗಳಿಗೆ ದಿಗಂಬರವೇ ಸೂಕ್ತ ಎಂಬುದು ಮಹಾದೇವಪ್ಪನವರ ಅನಿಸಿಕೆ ದೇಶಾಂಶರವರಿಗೆ ಸಮಾಜವನ್ನು ಹಾಗೂ ಜೀವನವನ್ನು ನೋಡುವ ದೃಷ್ಟಿ ಉಳಿದವರಿಗಿಂತ ಭಿನ್ನವಾಗಿದೆ. ಕೆಲವರಿಗೆ

---

[51] ಆರ್ಥರ್ ಮೈಲ್ಸ್ – ಬಸವೇಶ್ವರ ದರ್ಶನ – ಪು–೨೩.

[52] ದಿಗಂಬರ ವಚನಗಳು ನನ್ನನುಡಿ–ಪು XVII.

ಕೇವಲ ಕೆಟ್ಟದ್ದು ಕಾಣಿಸುತ್ತದೆ. ಆದರೆ ದೃಷ್ಟಿ ನಿಚ್ಚಳವಿರುವ ದೇಶಾಂತರಿಗೆ ಅಲ್ಲಿ ಒಳ್ಳೆಯದೂ ಕಂಡಿದೆ. ಅವರ ಈ ವಚನ ಸಂಕಲನದಲ್ಲಿ ೫೫೫ ವಚನಗಳಿವೆ.

ತುಂಬು ಜೀವನಾನುಭವದ ಸವಿಯನ್ನು ತನ್ನದೇ ಆದ ರೀತಿಯ ಅಭಿವ್ಯಕ್ತಿಯಲ್ಲಿ ಆಕಾರ ನೀಡಿರುವ ಶಾಂತಪ್ಪನವರು ಸದಾ

ಒಳಿತನು ಬಿತ್ತಿ ಒಳಿತನು ಬೆಳೆದು
ಒಳಿತನು ನೀಡಿ, ಒಳಿತನುಣ್ಣುವವರು.

ಅದನ್ನೇ ತಮ್ಮದೊಂದು ಹೇಳುತ್ತಾ ಈ ಭೂಗೋಲದ ಶಾಂತಿ ದೂತರು ಕಾಣಾ ದಿಗಂಬರ ಕರಿಬಸವೇಶ್ವರ ಎಂದಿದ್ದಾರೆ. ಜೀವನದಲ್ಲಿ ದನದಾಹಿಗಳನ್ನು ಬಾಹ್ಯಾಡಂಬರಿಗಳನ್ನು ಲಾಂಛನದಾರಿಗಳನ್ನು ಎಂದೂ ನಂಬಬಾರದೆನ್ನುವ ಕವಿ ಇವರು ಎಂದಿದ್ದರೂ ಈ ಕಾಲದ ನಕಲಿ ನೋಟುಗಳೆನ್ನುತ್ತಾರೆ.

ದೇಶವನ್ನು ರಕ್ಷಿಸುವ ಸೈನಿಕ, ಸರ್ವರನ್ನು ಸಾಕುವ ಸೃಷ್ಟಿಕ ಹಾಗೂ ವಿದ್ಯೆಯನ್ನು ನೀಡುವ ಶಿಕ್ಷಕರ ಈ ಮೂವರನ್ನು ದೇವದೂತರೆಂದು ಗೌರವಿಸುವ ಹುಡಗಿಯವರು ಅವರ ಮಹಾಕಾರ್ಯದ ಮೇಲೆಯೇ ಈ ದೇಶದ ಪ್ರಗತಿ ನಿಂತಿರುವುದನ್ನು ತಿಳಿಸುತ್ತಾರೆ. ಇಂದು ದೇಶದಲ್ಲಿಯ ಹಲವು ಕೆಟ್ಟ ಪರಿಸ್ಥಿತಿಗಳಿಗೆ ಇಲ್ಲಿಯ ಅಧಿಕಾರಿಗಳ, ರಾಜಕೀಯ ಮುಖಂಡರ, ಪ್ರಗತಿ ಪರಿಗಣಿನಿಸುವವರ ಅತಿಯಾಸೆಯೇ ಕಾರಣವೆಂದು ತಿಳಿಸುವ ಕವಿ.

'ಅತಿಯಾಸೆ ಗತಿಗೆಡಿಸುತ್ತದೆ / ಮತಿಗೆಡಿಸುತ್ತದೆ
ಊರು ಬಿಡಿಸುತ್ತದೆ; ಕೇರಿ ಬಿಡಿಸುತ್ತದೆ
ದೇಶ ಧರ್ಮ ಮಾನವತೆ ಬಿಡಿಸುತ್ತದೆ[೫೩]'

ಎಂದೂ ಎಚ್ಚರಿಸುತ್ತಾರೆ. ಅತಿ ಆಸೆಯಿಂದ ಈ ದೇಶವನ್ನು ಕಾಯಭೇದಾಗಿರುವವರು ಕಳ್ಳರಾದರೆ ಇಲ್ಲಿಯ ಪರಿಸ್ಥಿತಿ ವಿಪರೀತವಾಗುತ್ತದೆ. ಜನಮನ ಕಳ್ಳ ಆದಾಗ ಅಧ್ಯಾಪಕ ಬೋಧಿಸಲಾರ, ಆರಕ್ಷಕ ಸಂಹರಿಸಲಾರ, ಮಂತ್ರಿ ಶುದ್ಧ ಹಸ್ತನಾಗಿರಲಾರ, ನ್ಯಾಯಧೀಶ ನ್ಯಾಯ ಕೊಡಲಾರ, ಗುರು–ಹಿರಿಯರು ಸೆಗಣಿ ತಿನ್ನುವಾಗ ಕಿರಿಯರು ಹೇಸಿಗೆ ತಿನ್ನರೇ? ಎಂದೂ ಇದ್ದ ಸ್ಥಿತಿಯನ್ನು ಇದ್ದಂತೆ ಹೇಳಿ ಚುಚ್ಚುತ್ತಾರೆ. ಹಾಗಾಗಬಾರದೆನ್ನುವ ಅವರ–

---

[53] ದಿಗಂಬರ ವಚನಗಳು ವ. ೨೦೧ – ಪು–೪೫.

‘ಉಸಿರಾಡುವ ಗಾಳಿ, ಕುಡಿಯುವ ನೀರು
ಉಣ್ಣುವ ಅನ್ನ, ಉಡುವ ವಸ್ತ್ರ
ವಾಸಿಸುವ ಗುಡಿಸಲನ್ನು, ಕಸಿವವರು
ಕಸಾಯಿಗಿಂತ ಅತ್ತತ್ತ’

ಎಂದು ಹೇಳುವಲ್ಲಿಯ ಅವರ ಮನೋಧೋರಣೆಯ ಇಂದಿನ ಕಾಲಕ್ಕೆ ಅವಶ್ಯಕವಾಗಿರು ‘ಜೀವನ ಮುಖ ಧೋರಣೆಯನ್ನು ಎಲ್ಲರೂ ಹೊಂದಿರಬೇಕೆಂದು’ ಸಾರುತ್ತದೆ. ಮಾನವ ಜೀವನಕ್ಕೆ ಅತ್ಯವಶ್ಯಕವಾಗಿರುವ ಇದು ಕೇವಲ ಇಂದಿನವರೆಗೆ ಮಾತ್ರ ಅಲ್ಲ. ಮುಂದಿನ ತಲೆಮಾರುಗಳಿಗೂ ಕೂಡಾ ಇದು ಬೇಕಾಗುವಂತಹದ್ದು. ಅಂತೆಯೇ ಅವರು ಹಸಿದವರಿಗೆ ಅನ್ನ ನೀಡು, ನೀರಡಿಸಿದವರಿಗೆ ನೀರೂಡು, ಚಿಂದಿ ಉಟ್ಟವರ ಮೈ ಮುಚ್ಚು ನೆರಳಿಲ್ಲದವರಿಗೆ ಆಸರೆಯಾಗು, ಸಾವು ಬಂದರೆ ಗೊಣಗದೆ ಸ್ವಾಗತಿಸು ಎಂದು ಮುಂತಾಗಿ[೫೪] ಹೇಳುವ ಅವರ ಈ ವಚನ ಇಡಿ ಮಾನವ ಬದುಕಿನ ಸಾರ್ಥಕತೆಯನ್ನು ಹಾಗೂ ಏಕ ಕಾಲಕ್ಕೆ ಅವರು ನಂಬಿರುವ ಇಂದಿನ ‘ಹೊಸ ರೀತಿಯ’ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ. ಜೀವನದ ಅಧ್ಯಮ ಉತ್ಸಾಹವನ್ನು ದೇಶಾಂಶರು ಕಂಡಿರಿಸಿದ ರೀತಿ ನಿಜಕ್ಕೂ ಇಲ್ಲಿ ಗಮನಾರ್ಹವಾಗುತ್ತದೆ. ವಾಸ್ತವ ಪ್ರಜ್ಞೆ ಹಾಗೂ ಜೀವನದ ಸಾರ್ಥಕತೆಯ ಹೆಜ್ಜೆಗಳನ್ನು ಮನಮುಟ್ಟುವಂತೆ ತೋರಿಸುವ ಅವರ ಬರಹವು ಬದುಕಿನ ಒಂದು ಹೊಂದಿಕೆಯಾಗಿರವಂತಿದೆ.

ಅವರ ಕಾವ್ಯದಲ್ಲಿ ವಿಶೇಷವಾಗಿ ಅವರ ವಚನ ಸಂಕಲನದಲ್ಲಿ ಜೀವನ ಮೌಲ್ಯಗಳ ಸದಾಶಯದ ಚಿಂತನೆಗಳು ಸಾಕಷ್ಟಿರುವುದನ್ನು ಗುರುತಿಸಬಹುದಾಗಿದೆ. ಈ ನಿಟ್ಟಿನಲ್ಲಿ ದೇಶಾಂಶ ಹುಡಗಿಯವರ ಜೀವನ ಪ್ರಜ್ಞೆಯು ಅವರ ಕಾವ್ಯ ಹಾಗೂ ವಚನಗಳ ಮೂಲಕ ಮುಂಬರುವ ಜನಾಂಗಕ್ಕೆ ಕೈದೀವಿಗೆಯಾಗಿ ನಿಲ್ಲುತ್ತದೆ ಎನ್ನಬಹುದು.

ಅವರ ಕಾವ್ಯಗಳಲ್ಲಿ ಭಾವ ತೀವ್ರತೆಯಿಂದ ಹೊಮ್ಮಿರುವ ಕೆಲವು ಸೂಕ್ತಿಗಳಂತಹ ಮಾತುಗಳ ತುಂಬಾ ವಿವೇಚನಾಯುಕ್ತವಾಗಿದ್ದು, ಅವುಗಳನ್ನು ಕೆಳಗಿನಂತೆ ಅವರ ಆಶಯ, ಅಭಿವ್ಯಕ್ತಿ, ಸಾಮಾಜಿಕ ಕಾಳಜಿ ಹಾಗೂ ಜೀವನ ಮೌಲ್ಯಗಳ ಹಿನ್ನೆಲೆಯಲ್ಲಿ ಹೀಗೆ ಸಂಗ್ರಹಿಸಿ ಹೇಳಬಹುದು ಎನಿಸುತ್ತದೆ.

೧. ನ್ಯಾಯಕ್ಕೆ ಪಂಚಾಯ್ತಿ ಸಾಲಕ್ಕೆ ಸೊಸೈಟಿ.

---

[54] ದಿಗಂಬರ ವಚನಗಳು ವ ೨೧೬ – ಪು–೪೯.

೨. ಭಕ್ತಿಗೆ ಬಡಗಣ ಭೋಗಕ್ಕೆ ತೆಂಕಣ.

೩. ಕನ್ನಡ ದನಿಯಿದೆ ಕಲ್ಲೊಳು ಇಲ್ಲಿ.

೪. ಸತ್ತವಳ ಹೆಸರಲ್ಲಿ ಎತ್ತರದ ಗುಡಿಕಟ್ಟಿ ಸುತ್ತುವರು.

೫. ಬಾಗಿದರೆ ಒದೆಯುವರು ಒದೆದರಿಡಿಗೆರಗುವರು.

೬. ಜ್ಯೋತಿಯು ಶಕ್ತಿಯು ಬೆಂಕಿಯು ಬತ್ತಿ.

೭. ನಸುಕಿನಲ್ಲೇಳ್ವಗವರ ಗೋಳೇನು ಗೋಳು.

೮. ದಾರ ಇದ್ದವ ಭಾರ ಇದ್ದವ ಪಡೆವುದೊಂದೇ ಉಸಿರು

೯. ಹಳೆ ವರುಷ ಅಳು ಎಂದರೂ ನಗಬೇಕೆಂಬ ಹಿರಿಯಾಸೆ.

೧೦. ನೀ ನನ್ನ ಸಂಗಾತಿ ಅಲ್ಲಲ್ಲ! ಒಡತಿ.

೧೧. ನೆರೆ ನಾಡುಗಳಲಿರುವ ನಿಮ್ಮವರ ಪಾಡೇನು?

೧೨. ಒಬ್ಬರ ಹೆಣದ ಮೇಲೆ ಇನ್ನೊಬ್ಬರುದ್ಧಾರ.

೧೩. ತೂಕದ ಮತೊಂದು ನುಡಿ ನೀ ಜ್ವಾಕೀಲೆ ನುಡಿದಂತೆ ನಡಿ.

೧೪. ಕರೆಯದೆ ಬರಬೇಡ। ಕರೆದರೊಲ್ಲೆನಬೇಡ.

೧೫. ಕಲ್ತಿದ್ ವಿದ್ಯಾ ಕೆಟ್ಟದೆಂದೂ ಮಾಡಲ್ರೆವ್ವ.

೧೬. ಕಚೇರಿ ಹೊಲಸೆಬ್ಬಿಸುವ ಕಾಗೆಗಳು.

೧೭. ಹಂಭರು ಅರೆತುಂಬಿದ ಕುಂಭರು.

೧೮. ವಿಧವೆಯರ ಸಹಗಮನ ಸ್ತ್ರೀ ಕುಲದ ಅಪಮಾನ.

೧೯. ಏಳಲಾರದ ಎತ್ತು ಮೆಳೆಯ ಮೇಲೆ ಬಿತ್ತು.

೨೦. ಸಕ್ಕರೆಯ ಹಳಿದರೆ ಮಧುಮೇಹ ಹೋದಿತೇ?

೨೧. ಮೂಗು ಹೋದ ಮೇಲೆ, ಮೂಗುತಿಗೆ ಹಂಬಲಿಸಿದಂತೆ.

೨೨. ಮುತ್ತಿನಾರತಿ ಎತ್ತಲು ಮುತ್ತೈದೆಯರೇ ಬೇಕೆ?

೨೩. ಶಿವನ ಟಂಕಶಾಲೆಯ ನಾಣ್ಯಗಳು ನಾವು.

೨೪. ಬಸವ ತತ್ವವೆಂಬುದು ದುಡಿದು ಬದುಕುವುದು.

೨೫. ಅಟ್ಟಿಟ್ಟ ಅಡಿಗೆಯಂತೆ ಈ ಸುಂದರ ಕಾಯ.

೨೬. ಬಂಡೆ ಹೊತ್ತವರಿರಬಹುದು ಬೆಟ್ಟ ಹೊತ್ತವರಾರೂ ಇಲ್ಲ.

# ಕಾವ್ಯೇತರ ಸಾಹಿತ್ಯದ – ಒಳನೋಟ

**ಭಾಗ–೨**

ದೇಶಾಂಶ ಹುಡಗಿಯವರು ಮುಖ್ಯವಾಗಿ ಕವಿ ಎಂದೆ ಹೆಸರುವಾಸಿಯಾಗಿದ್ದರೂ, ಅವರ ಕಾವ್ಯೇತರ ಕೃತಿಗಳು ಗಣನೀಯವಾಗಿವೆ. ಗದ್ಯಪದ್ಯಗಳೆರಡರಲ್ಲೂ ಸಿದ್ಧ ಹಸ್ತರೆನಿಸಿರುವ ಇವರು ಒಟ್ಟಾರೆ ಬೀದರ ಜಿಲ್ಲೆಯ ಪ್ರಮುಖ ಸಾಹಿತ್ಯ ಎನ್ನಬಹುದು.

ಒಬ್ಬರ ಉತ್ತಮ ಬರಹಗಾರನಾದವನು ಏಕಕಾಲಕ್ಕೆ ಕವಿತೆಗಳನ್ನು ಬರೆಯುತ್ತಾ ಇನ್ನೀತರ ಕಥೆ, ಕಾದಂಬರಿ, ವಿಮರ್ಶೆ, ಜೀವನ ಚಿತ್ರಣ, ಸಂಶೋಧನೆ, ಪ್ರಬಂಧ ಇತ್ಯಾದಿ ಕ್ಷೇತ್ರಗಳಲ್ಲಿಯೂ ತನ್ನ ಸೃಜನ ಹಾಗೂ ಸೃಜನೇತರ ಸಾಮರ್ಥ್ಯಗಳನ್ನು ಪರೀಕ್ಷಿಸಿಕೊಳ್ಳುತ್ತಾರೆ. ಈ ದೃಷ್ಟಿಯಲ್ಲಿ ದೇಶಾಂಶರು ಒಬ್ಬ ಮುಖ್ಯ ಲೇಖಕರಾಗಿ ಕಂಡು ಬರುತ್ತಾರೆ. ಅವರ ಕಾವ್ಯೇತರ ಕೃತಿಗಳೂ ಕಾವ್ಯದಷ್ಟೇ ಪ್ರಮುಖವಾಗಿ ಹಾಗೂ ಅವುಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟಗೊಂಡಿವೆ. ಇವುಗಳನ್ನು ಕುರಿತು ಈ ವರೆಗೆ ಈ ಜಿಲ್ಲೆಯಾಗಲಿ ಅಥವಾ ನಡಿನಲ್ಲಾಗಲಿ ಬಹುಮುಖ್ಯವಾದ ಚರ್ಚೆ ಹಾಗೂ ವಿಮರ್ಶೆಗಳಾವವೂ ನಡೆದಿಲ್ಲ. ದೇಶಾಂಶರ ಸಮಗ್ರ ಸಾಹಿತ್ಯದ ಅಧ್ಯಯನವು ಅವರ ಕಾವ್ಯ ಹಾಗೂ ಕಾವ್ಯೇತರ ಕೃತಿಗಳೆಲ್ಲದರ ಅಧ್ಯಯನದಿಂದ ಮಾತ್ರ ಪೂರ್ಣಗೊಳ್ಳುವುದರಿಂದ ಅವರ ಎಲ್ಲ ಕೃತಿಗಳನ್ನು ಇಲ್ಲಿ ಅವಲೋಕಿಸಲಾಗಿದೆ.

'ವಯಸ್ಕರ ಶಿಕ್ಷಣ ಗೀತೆಗಳು', ಕಾಯಕ ಪರಿಣಾಮಿ, ಮುಕ್ತಿ ಮಂದಿರದ ಶ್ರೀ ಶಿವಯೋಗಿ ಸ್ವಾಮಿಗಳು, ಮೊದಲಾದ 'ವ್ಯಕ್ತಿ ಚಿತ್ರ' ಲೇಖನಗಳು ಗದ್ಯ ಕೃತಿಗಳಲ್ಲಿ ಪ್ರಕಟವಾಗಿರುವಂಥವುಗಳು. ಸಂಭಾವನಾ ಗ್ರಂಥಗಳಿಗಾಗಿ ಗೌರವ ಗ್ರಂಥಗಳಿಗಾಗಿ, ಸನ್ಮಾನ ಗ್ರಂಥಗಳಿಗಾಗಿ ಬರೆದ ಲೇಖನಗಳಿವು. ಈ ಲೇಖನಗಳಲ್ಲಿಯ ವಿಷಯಕ್ಕನುಗುಣವಾಗಿ ಅರ್ಥೈಸಿ, ಉತ್ತಮ್ಮ ರೀತಿಯಲ್ಲಿ ವಿಮರ್ಶಿಸಿ ಬರೆದಂತೆ ಲೇಖನಗಳಾಗಿವೆ ಇವು ಎಂಬುದನ್ನು ಗಮನಿಸಬಹುದು. ದೇಶಾಂಶ ೧೫ ಕಾವ್ಯೇತರ ವ್ಯಕ್ತಿ ಚಿತ್ರಣ ೩೧ ಅನುವಾದ, ೪ ಸಂಕೀರ್ಣ ಹಾಗೂ ೫

ಸಣ್ಣ ಕಥೆಗಳೆಂದು ವಿಭಾಗಿಸಿ, ಈ ಭಾಗಗಳಡಿಯಲ್ಲಿ ಅವುಗಳನ್ನು ಪರಿಚಯಿಸಲಾಗಿದೆ.

**೨–೧ ಸಂಪಾದನೆ:**

ದೇಶಾಂಶರು ಈ ವರೆಗೆ ಸಂಪಾದಿಸಿಕೊಟ್ಟಿರುವ ಕೃತಿಗಳೆಂದರೆ,

೧. ಸಿದ್ಧರಾಮೇಶ್ವರ ವಚನಗಳು (೧೯೯೮)
೨. ಧರಿನಾಡಿನ ಕಾವ್ಯ (೨೦೦೧)
೩. ಬಸವ ಶಿಶು (೨೦೦೩)
೪. ಗುರು ಪುತ್ರ. (೨೦೦೩)
೫. ಕಾವ್ಯ ಕಾರಂಜಿ (೨೦೦೩)
೬. ಧರಿನಾಡಿನ ಜಾನಪದ ಗಾದೆಗಳು (೨೦೦೫)
೭. ಕನ್ನಡದ ದೀಪ (೨೦೦೬)
೮. ಸ್ನೇಹ ಜೀವಿ. (೨೦೦೬)

ಬೀದರ ಜಿಲ್ಲೆಯ ಪ್ರಸಿದ್ಧ ಪ್ರಕಾಶಕರಾಗಿರುವ ಕ.ಕ. ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್ತು ಬೀದರ, ಧರಿನಾಡು ಕನ್ನಡ ಸಂಘ ಬೀದರ, ಕನ್ಯಾಕುಮಾರಿ ಪ್ರಕಾಶನ ಬೀದರ, ಡಾ. ಜಿ.ಬಿ. ವಿಸಾಜಿ ಅಭಿನಂದನ ಗ್ರಂಥ ಸಮಿತಿ ಭಾಲ್ಕಿ ಮೊದಲಾದ ಸಂಸ್ಥೆಗಳು ಸಾಹಿತ್ಯಿಕ ಮೌಲ್ಯ ಮತ್ತು ವೈಚಾರಿಕ ಮೌಲ್ಯಗಳುಳ್ಳ ಕೃತಿಗಳನ್ನು ಪ್ರಕಟಿಸುವ ಕಾರ್ಯಕ್ಕೆ ಕೈಹಾಕಿದ್ದರ ಫಲವೇ ಈ ಮೇಲ್ಕಾಣಿಸಿದ ಕೃತಿಗಳು ಪ್ರಕಟಗೊಂಡಿವೆ.

ಬಸವ ಮುಕ್ತಿ ಮಂದಿರದ ಶ್ರೀಗಳಾದ ಶ್ರೀ ಮ.ನಿ.ಪ್ರ. ಶಿವಯೋಗೀಶ್ವರ ಮಹಾಸ್ವಾಮಿಗಳವರ ಪೀಠಾರೋಹಣದ ರಜತ ಮಹೋತ್ಸವದ ಸವಿನೆನಪಿಗಾಗಿ 'ಬಸವ ಮುಕ್ತಿ ಮಂದಿರದ ಮುತ್ತಿನ ಮಾಲೆ – ೧೨ ರಲ್ಲಿ 'ಶ್ರೀ ಸಿದ್ಧರಾಮೇಶ್ವರರ ವಚನಗಳು ಪ್ರಕಟವಾಗಿವೆ'. ಈ ಶ್ರೀಗಳು ಭಾಲ್ಕಿ–ಭಾತಂಬ್ರಾ ವಿರಕ್ತ ಮಠದ ಪೀಠಾರೋಹಣ ಮಾಡಿ ೨೫ ವರ್ಷಗಳು ಗತಿಸಿರುವ ಹಿನ್ನೆಲೆಯಲ್ಲಿ ಪ್ರಕಟವಾದ ೨೫ ವಚನಗ್ರಂಥಗಳಲ್ಲಿ ಒಂದಾಗಿದ್ದು, ಇದರಲ್ಲಿ ಸಿದ್ಧರಾಮೇಶ್ವರ ೧೨೫ ವಚನಗಳಿವೆ. ೧೨ ನೆಯ ಶತಮಾನದ ಪ್ರಸಿದ್ಧ ಶರಣ ಹಾಗೂ ವಚನಕಾರರಲ್ಲಿ ಒಬ್ಬರಾಗಿರುವ ಸಿದ್ಧರಾಮೇಶ್ವರರು ಸೊಲ್ಲಪುರದವರು, ಶೂನ್ಯ ಸಿಂಹಾಸನಕ್ಕೆ ಮೂರನೆಯ

ಅಧಿಪತಿಯಾಗಿದ್ದ ಇವರು ಶ್ರೀ ಚನ್ನಬಸವಣ್ಣನವರಿಂದ ಲಿಂಗದೀಕ್ಷೆ ಪಡೆದವರು. 'ಅವರತ್ತೆಂಟು ಸಾವಿರ ವಚನಗಳು ಹಾಡಿದ್ದಾಗಿ ಹೇಳುತ್ತಾರೆ' ಕಪಿಲ ಸಿದ್ಧ ಮಲ್ಲಿಕಾರ್ಜುನನೆಂಬ ಅಂಕಿತನಾಮವುಳ್ಳ ಈ ಶರಣರ ಇಲ್ಲಿಯ ವಚನಗಳು ಇಷ್ಟಲಿಂಗ ತತ್ವವನ್ನು ಮನವರಿಕೆ ಮಾಡಿಕೊಡುವ ಉತ್ತಮ ಸಾಧನಗಳಾಗಿವೆ. ಅವರ ಅನೇಕ ವಚನಗಳು ಸಾಮಾಜಿಕ ಕಳಕಳಿ ಹಾಗೂ ಬಸವ ನಿಷ್ಠೆಗೆ ಪ್ರಸಿದ್ಧವಾಗಿವೆ. ಇಂತಹ ವಚನಗಳು ಒಂದು ಉತ್ತಮ ಕಿರು ಕೃತಿಯನ್ನು ದೇಶಾಂಶರು ಸೊಗಸಾಗಿ ಸಂಪಾದಿಸಿದ್ದಾರೆ.

ಅವರ ಅಧ್ಯಕ್ಷತೆಯ 'ಧರಿನಾಡು ಕನ್ನಡ ಸಂಘ' ಬೀದರದಿಂದ ಪ್ರಕಟಗೊಂಡಿವೆ. ಇದರಲ್ಲಿ ೨ ನ್ನು ಬೀದರ ಜಿಲ್ಲೆಯ ಹಲವು ಉದಯೋನ್ಮುಖ ಕವಿಗಳ ಕವಿತೆಗಳನ್ನಾಯ್ದು ಸಂಪಾದಿಸಿದ್ದರೆ, ಉಳಿದವುಗಳಲ್ಲಿ ದೇಶಾಂಶರೇ ಸ್ವತಃ ಸಂಗ್ರಹಿಸಿದ ಬೀದರ ಜಿಲ್ಲೆಯ ಜಾನಪದ ಗಾದೆಗಳಿದ್ದು, ಇನ್ನೊಂದು ಶಂಭುಲಿಂಗ ವಾಲ್ದೊಡ್ಡಿಯವರ ಜೀವನ ಮತ್ತು ಸಾಧನೆಯನ್ನು ಒಳಗೊಂಡಿರುವ ಅವರ ಅಭಿನಂದನಾ ಕೃತಿಯಿದೆ.

ಧರಿನಾಡಿನ ಕಾವ್ಯವು ಬೀದರ ಜಿಲ್ಲೆಯ ಪ್ರಾತಿನಿಧಿಕ ಕವನ ಸಂಕಲನವಾಗಿದ್ದು, ಇದರಲ್ಲಿ ೪೬ ಕವಿಗಳ ೪೬ ಕವಿತೆಗಳಿವೆ. ಈ ಜಿಲ್ಲೆಯ ಕಾವ್ಯಕೃಷಿ ಮೊದಮೊದಲು ನವೋದಯದಲ್ಲಿ ಆರಂಭಗೊಂಡು ಆ ಮೇಲೆ ಬಂಡಾಯಕ್ಕೆ ಅನುವುಮಾಡಿಕೊಟ್ಟ ರೀತಿಯನ್ನು ಇಲ್ಲಿ ಗುರುತಿಸಬಹುದಾಗಿದೆ. ಇದು ಕನ್ನಡ ಸಾಹಿತ್ಯ ಪರಿಷತ್ತು ಬೀದರದಿಂದ ಪ್ರಕಾಶಿತಗೊಂಡಿದೆ. ಕಾವ್ಯ ಕಾರಂಜಿಯು ಹಂಸಕವಿಗಳ ಜೊತೆಯಲ್ಲಿ ದೇಶಾಂಶ ಹುಡಗಿಯವರು ಸಂಪಾದಿಸಿದ ಕಾವ್ಯವಾಗಿದ್ದು, ಇದರಲ್ಲಿ ೬೯ ಕವಿಗಳ ೬೯ ಕವನಗಳಿವೆ. ಇದರಲ್ಲಿ ೨೫ ಸಂಖ್ಯೆಯ ಕವಿಯಿತ್ರಿಯರಿರುವುದೊಂದು ವಿಶೇಷವಾಗಿದ್ದು, ಬೀದರ ಜಿಲ್ಲೆಯ ಎಲ್ಲಾ ತಾಲೂಕಿನ ಕವಿಗಳೂ, ಹೊರನಾಡಿನ ಕವಿಗಳೂ ಇಲ್ಲಿ ಸೇರಿದ್ದಾರೆ.

'ಕಾವ್ಯ ಕಾರಂಜಿ' ತನ್ನದೇ ಆದ ವೈಶಿಷ್ಟ್ಯಗಳನ್ನು ಹೊಂದಿರುವ ಕೃತಿಯಾಗಿದೆ. ಇದರಲ್ಲಿ ಒಳಗೊಂಡಿರುವ ಕವಿಗಳಲ್ಲಿ ೧೨ ವರ್ಷಗಳ ಮುಗ್ಧ ಬಾಲಕ–ಬಾಲಕಿಯರಿದ್ದಾರೆ. ಎಪ್ಪತ್ತು ವರ್ಷ ದಾಟಿದ ಅನುಭಾವಿಗಳು ಇದ್ದಾರೆ. ವಿದ್ಯಾರ್ಥಿ–ವಿದ್ಯಾರ್ಥಿನಿಯರು, ಅಧ್ಯಾಪಕ, ಪ್ರಾಧ್ಯಾಪಕರು, ಪ್ರಾಂಶುಪಾಲರು ಸೇರಿದ್ದಾರೆ. ಪೊಲೀಸ್ ಪೇದೆ, ವಲಯ ನಿರೀಕ್ಷಕರೂ ನಾನಾ ಧರ್ಮದವರೂ, ಕುಮಾರಿಯರು, ಅವಿವಾಹಿತರೂ, ವಿಧವೆಯರೂ ಸೇರಿದ್ದಾರೆ. ಶೋಷಿತರು, ಕೆಳವರ್ಗದವರು, ದಲಿತರು, ರಂಗ ಕಲಾವಿದೆರು, ಕಾವ್ಯ ಕೃಷಿಯಲ್ಲಿ ಈಗಾಗಲೇ

ಪಳಗಿದ ಕಾವ್ಯ ಕೃಷಿಕರು ಇಲ್ಲಿಯ ಕವಿಗಳಾಗಿದ್ದು, ಅವರ ಕವಿತೆಗಳು ಬೀದರ ಜಿಲ್ಲೆಯನ್ನು ಕುರಿತು ಹಲವು ವಿಷಯಗಳ ಮೇಲೆ ಬೆಳಕು ಚಲ್ಲುತ್ತವೆ. ಈ ಜಿಲ್ಲೆಯ ಕಾವ್ಯದ ಚಿಲುಮೆಯಾಗಿರುವ ಈ ಸಂಕಲನವು ದೇಶಾಂಶರ ಶ್ರಮದಿಂದ ತುಂಬಾ ಸೊಗಸಾಗಿ ಮೂಡಿ ಬಂದಿದೆ.

'ಧರಿನಾಡಿನ ಜಾನಪದ ಗಾದೆಗಳು' ಎಂಬುದು ಅದೇ ಧರಿನಾಡು ಕನ್ನಡ ಸಂಘದಿಂದ ೨೦೦೫ ರಲ್ಲಿ ಪ್ರಕಟವಾಗಿದೆ. ೧೧೭೯ ಗಾದೆ ಮಾತುಗಳನ್ನು ಇಲ್ಲಿ ಸಂಗ್ರಹಿಸಲಾಗಿದ್ದು, ಅದರ ಅಚ್ಚುಕಟ್ಟುತನದಲ್ಲಿ ದೇಶಾಂಶ ಹುಡಗಿಯವರ ಕ್ಷೇತ್ರ ಕಾರ್ಯದ ಶ್ರಮ ಎದ್ದು ಕಾಣುತ್ತದೆ. ಜಾನಪದ ಕ್ಷೇತ್ರಕ್ಕೆ ಹುಲ್ಲುಗಾವಲು ಈ ಬೀದರ ಜಿಲ್ಲೆ 'ಬುಲಾಯಿ' ಹಾಡುಗಳ ವಿಶಿಷ್ಟ್ಯತೆಯಿಂದ ಪ್ರಸಿದ್ಧವಾಗಿರುವ ಈ ಜಿಲ್ಲೆಯ, ಕೋಲಾಟ, ಶೀಗಿ ಹಾಡುಗಳು, ಸಂಪ್ರದಾಯದ ಹಾಡುಗಳು, ಮೋಹರಂ ಹಾಡುಗಳು ಹಾಗೂ ಜಾನಪದ ಗಾದೆಗಳೂ ತುಂಬಾ ಪ್ರಮುಖವಾಗಿವೆ.

ತಮ್ಮ ಜೀವನವಿಡೀ ಗಾದೆಗಳನ್ನು ಕೇಳಿ ಬಳಸಿ, ಅನುಭವಿಸಿದ ದೇಶಾಂಶ ಹುಡಗಿಯವರು ಅವುಗಳನ್ನು ಸಂಕಲಿಸಿ, ಸಂಪಾದಿಸಿ ಈಗ ಆ ಮೂಲಕ ಅವುಗಳನ್ನು ನಮಗೆ ಇಲ್ಲಿ ಉಣಬಡಿಸಿದ್ದಾರೆ. ಬೀದರ ಜಿಲ್ಲೆಯ ಮುಡಬಿ, ಹುಡಗಿ, ಹಿರನಾಗಾಂವ, ಚಿಕನಾಗಾಂವ, ಮೈಸಲಗಿ, ಅಂಬಲಗಿ, ಎಕಲೂರು, ಸಿರಗಾಪೂರು, ಹಾರಕೂಡ, ಕೊಳ್ಳೂರು, ಖಾನಾಪೂರ, ಬಗದೂರಿ ಮೊದಲಾದ ಊರುಗಳಿಂದ ಸಂಗ್ರಹಿಸಿದ ಗಾದೆಗಳಿವು. ಇವು ಸಂಕಲನಗೊಳ್ಳಲು ಆರಂಭವಾದದ್ದು ೨೦೦೨ ಕ್ಕಿಂತ ಸು. ೧೫ ವರ್ಷ ಮೊದಲು ಇಲ್ಲಿಯ ಗಾದೆ ಮಾತುಗಳು, ಕನ್ನಡ, ಮರಾಠಿ, ತೆಲುಗು, ಉರ್ದು ಮೊದಲಾದ ಭಾಷೆಗಳ ಕಿಚ್ಚಡಿಯ ರುಚಿಯಿಂದ ಕೂಡಿವೆ. ಕನ್ನಡದ ಒಂದೆರಡು ಪದಗಳ ಜತೆಗೆ ಅನ್ಯ ಭಾಷೆಗಳ ಸುಂದರ ಮೇಳವಾದಂತಾಗಿ ಸಂಗ್ರಹಗೊಂಡಿದೆ[1]. ಮರಾಠಿ ಪ್ರಭಾವದಲ್ಲಿ ಅಡಗಿದ ಕನ್ನಡವನ್ನು ಹುಡುಕಬೇಕಾದ ಸ್ಥಿತಿ ಕೆಲವು ಗಾದೆಗಳಲ್ಲಿರುವುದನ್ನು ಅವರು ಸಂಗ್ರಹಿಸಿಟ್ಟಿದ್ದಾರೆ. ಗಾದೆ ವೇದಕ್ಕೆ ತಲೆದಿಂಬು ಎಂಬುದರಿಂದ ಗಾದೆಗಳನ್ನು ಬಲ್ಲವನೇ ಗಾದೆಗಾರ ಎಂದು ಹೇಳುವುದರಿಂದ ದೇಶಾಂಶರನ್ನು ನಾವಿಲ್ಲಿ ಗಾದೆಗಾರ ಎಂದೂ ಗುರುತಿಸಬಹುದಾಗಿದೆ.

ಈ ಗಾದೆಗಳ ಸಂಗ್ರಹದಿಂದ ಇಲ್ಲಿಯ ದಿನ ಬಳಕೆಯ ಮಾತನ್ನು ಮಥಿಸಿ ಮಥಿಸಿ ನೋಡಬಹುದಾಗಿದೆ. ಈ ಮೂಲಕ ಬೀದರ ಜಿಲ್ಲೆಯ ಜಾನಪದ

---

[1] ದೇಶಾಂಶ ಹುಡಗಿ – ಧರಿನಾಡಿನ ಜಾನಪದ ಗಾದೆಗಳು ಮುನ್ನುಡಿ–೨೦೦೫ – ಪು–X.

ಸರ್ವಜ್ಞರನ್ನು ಗುರುತಿಸಬಹುದಾಗಿದೆ. ನಾನಾ ವಿಷಯದ ಪ್ರಸ್ತಾಪವಿರುವ ಈ ಗಾದೆಗಳು ಧರಿನಾಡಿನ ಕನ್ನಡದ ವಿಶಿಷ್ಟ ಪದ ಬಳಕೆಯ ಅರ್ಥವನ್ನು ಮನದಟ್ಟು ಮಾಡಿಕೊಡುತ್ತದೆ. ಆ ನಿಟ್ಟಿನಲ್ಲಿ ದೇಶಾಂಶ ಹುಡಗಿಯವರ ಪ್ರಾಮಾಣೀಕ ಪ್ರಯತ್ನ ಇದರ ಸಂಪಾದನೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ ಎನ್ನಬಹುದು.

"ಬಸವ ಶಿಶು" ಹಾಗೂ 'ಗುರುಪುತ್ರ' ಎಂಬ ಸಂಪಾದಿತ ಕೃತಿಗಳು ಕ್ರಮವಾಗಿ ೨೦೦೨ ರಲ್ಲಿ ಸಂಪಾದಿತಗೊಂಡಿವೆ. 'ಬಸವ ಶಿಶು' ಎಂಬುದು ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರ ಬದುಕು ಮತ್ತು ಸಾಧನೆಯನ್ನು ಕುರಿತು ಬೆಳಕು ಚೆಲ್ಲುವ ಕೃತಿಯಾಗಿದ್ದು, ಇದರಲ್ಲಿ ೨ ಕವನಗಳು ಹಾಗೂ ೨೦ ಲೇಖನಗಳಿವೆ. ಈ ನಾಡಿನ ವಿವಿಧ ವಿದ್ವಾಂಸರು ಶ್ರೀ ಬಸವಲಿಂಗ ಪಟ್ಟದ್ದೇವರನ್ನು ಕುರಿತು ಬರೆದಿರುವ ಲೇಖನಗಳಾಗಿವೆ. ನಾಡು ಹಾಗೂ ಹೊರನಾಡಿಗೆಲ್ಲ ಚಿಪರಿಚಿತರಾದ ಲಿ. ಶ್ರೀ ಮ.ಘ.ಚ. ಡಾ. ಚೆನ್ನಬಸವ ಪಟ್ಟದ್ದೇವರ ಅಡಿ ಮುಟ್ಟಿ ಪುನೀತವಾದ ಈ ಮಣ್ಣಿನಲ್ಲಿ ಅವರ ಉತ್ತರಾಧಿಕಾರಿಯಾಗಿ ಬಂದವರು ಶ್ರೀ ಬಸವಲಿಂಗ ಪಟ್ಟದ್ದೇವರು. ಭಾಲ್ಕಿ ಹಿರೇಮಠದ ಶರಣ ಸಿರಿಯ ಸುತ್ತಣ ನಾಡಿನಲ್ಲಿ ಶರಣ ಮಾರ್ಗದಲ್ಲಿಯೇ ನಡೆದು ಆ ಸಿರಿಯನ್ನು ಸದಾ ಸಂರಕ್ಷಿಸಿಕೊಂಡು ನಡೆದವರು. ಇವರು ಬಸವ ಬಳಗದ ಬಳಿ ಹಚ್ಚಿಸಿ, ಚೆನ್ನನ ಹಾದಿಲಿ ಪಯಣಿಸಿ, ಗುರುವನ್ನು ಸಮಗಟ್ಟಿದ ಶಿಷ್ಯನೆಂದು ಹೆಸರುಗಳಿಸಿದವರು.

ಶಿಕ್ಷಣ ಪ್ರೇಮಿ, ಮಾತೃ ಹೃದಯ ಸಾಹಿತಿ, ಮಮತೆ ವಾತ್ಸಲ್ಯಗಳ ಮೂರ್ತಿ. ಗುರುದೇವ ಎಂದು ಮುಂತಾಗಿ ಕರೆಯಿಸಿಕೊಳ್ಳುತ್ತಿರುವ ಶಿವರಾಜ, ರಾಚಪ್ಪ ಕಾಡೋದೆಯವರು ತಮ್ಮ ಪೂರ್ವಾಶ್ರಮವನ್ನು ಕರೆದುಕೊಂಡು, ಶರಣ ಮಾರ್ಗದಲ್ಲಿ ಸಾಗಿ ಬಂದ ಅವರ ಸಾಧನೆಯ ಪಥವನ್ನು ಗುರುತಿಸುವ ಈ ಕೃತಿಯು ಉತ್ತಮವಾಗಿದೆ. ದೇಶಾಂಶ ಹುಡಗಿಯವರ ಅಭ್ಯಾಸ ಪೂರ್ಣ ಹಾಗೂ ಸಂಶೋಧನಾತ್ಮಕ ಸಂಪಾದಕರ ನುಡಿಯನ್ನು ಒಳಗೊಂಡಿರುವ ಇದು ಶ್ರೀ ಬಸವಲಿಂಗ ಪಟ್ಟದ್ದೇವರನ್ನು ಸಾಕ್ಷಾತ್ಕರಿಸುತ್ತದೆ ಎನ್ನಬಹುದು.

ಕನ್ಯಾಕುಮಾರಿ ಪ್ರಕಾಶನ ಬೀದರದಿಂದ ಪ್ರಕಟವಾಗಿರುವ ದೇಶಾಂಶ ಹುಡಗಿಯವರ ಮತ್ತೊಂದು ಸಂಪಾದಿತ ಕೃತಿ ಎಂದರೆ "ಗುರುಪುತ್ರ" ಭಾಲ್ಕಿಯಲ್ಲಿರುವ ಶರಣ ಜಿ.ಎಚ್. ಶಿವ ಮಠರು ಅರವತ್ತು ವರ್ಷ ಪೂರೈಸಿದ ಸ್ಮರಣಾರ್ಥವಾಗಿ ಮಾಡಿಬಂದ ಗ್ರಂಥವಿದು. ಕಲ್ಯಾಣ ಕರ್ನಾಟಕದ ನಡೆದಾಡುವ ದೇವರೆಂದೂ, ದಲಿತೋದ್ಧಾರಕರೆಂದೂ ಖ್ಯಾತರಾದ ಲಿಂ. ಡಾ. ಚನ್ನಬಸವ ಪಟ್ಟದ್ದೇವರು ದಲಿತಾಂಬುಧಿಯ ಶಿವ ಮಠವೆಂಬ ಕಪ್ಪೆ ಚಿಪ್ಪಿನಲ್ಲಿ ಸ್ವಾತಿ ಮಳೆ

ಹನಿಯಾಗಿ ಬಿದ್ದು ಶರಣ ಮುತ್ತನ್ನಾಗಿ ಪರಿವರ್ತಿಸಿದ್ದಾರೆ. ಅಂತೆಯೇ ಜಿ.ಎಚ್. ಶಿವಮಠರು ತೊಳೆದ ಮುತ್ತಿನಂತೆ ಹೊಳೆಯುತ್ತಿದ್ದಾರೆ[2]. ನಂತರದ ಬಸವಲಿಂಗ ಪಟ್ಟದ್ದೇವರಲ್ಲಿ ತಮ್ಮ ಗುರುಗಳನ್ನು ಕಂಡುಕೊಂಡ ಶಿವಮಠರು 'ಲಿಂಗದೀಕ್ಷೆ' ಪಡೆದಾಗಿನಿಂದ ಶ್ರೀಮಠದ ಕಾರ್ಯ ದಾಸೋಹಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬಾಳುತ್ತಿದ್ದಾರೆ. ಈಗಾಗಲೇ ೬೯ ವಸಂತಗಳನ್ನು ಪೂರೈಸಿರುವ ಅವರು ತುಂಬಾ ಗಟ್ಟಿ ಮುಟ್ಟಿದ್ದಾರೆ. ಗಣಾಚಾರಿಯಾಗಿರುವ ಶಿವಮಠರೆಂದರೆ ಶಿವಮಠರೇ. ಅವರದು ಅವರದೇ ಮಾರ್ಗ. ಇವರನ್ನು ಕುರಿತು ೧ ಕವನ ಹಾಗೂ ೧೦ ಲೇಖನಗಳ ಸಂಗ್ರಹ ಈ ಕೃತಿಯಲ್ಲಿದ್ದು, 'ಶಿವಮಠರ ಬದುಕು – ಸಾಧನೆಯನ್ನು ಕುರಿತು ನೈಜ ಚಿತ್ರಣ ಇಲ್ಲಿ ಕಾಣಸಿಗುತ್ತದೆ ಎನ್ನಬಹುದು'.

ಅಂತೆಯೇ ೨೦೦೬ ರಲ್ಲಿ ದೇಶಾಂಶ ಹುಡಗಿ (ಸಹಸಂಪಾದಕ ಹಂಸಲೇಖ) ಯವರಿಂದ ಸಂಪಾದಿತವಾಗಿರುವ ಅಭಿನಂದನಾ ಕೃತಿಗಳೆಂದರೆ – 'ಕನ್ನಡದ ದೀಪ', ಮತ್ತು ಸ್ನೇಹ ಜೀವಿ, ಡಾ. ಜಿ.ಬಿ. ವಿಸಾಜಿಯವರ ಅಭಿನಂದನಾ ಕೃತಿ. ಕನ್ನಡದ ದೀಪ, ಡಾ. ಚನ್ನಬಸವ ಪಟ್ಟದ್ದೇವರು ಕನ್ನಡ ಶಾಲೆಗಳ ಚಳುವಳಿ ಹುಟ್ಟು ಹಾಕಿದ ಕಲಿಗಳಾದರೆ, ಜಿ.ಬಿ. ವಿಸಾಜಿಯವರು ಇಲ್ಲಿ ಕನ್ನಡ ಬಿತ್ತಿ-ಬೆಳೆಸುವ ಚಳುವಳಿಗಾರರಾದರು[3]. ಈ ಚಳುವಳಿಗೆ ರಾಜಕೀಯ ಘೋಷಣೆ ಒದಗಿಸಿದವರು ಭೀಮಣ್ಣ ಖಂಡ್ರೆಯವರೂ ನಾಡು-ನುಡಿ ಕಟ್ಟುವ ಚಳುವಳಿಗಾರರಲ್ಲಿ ಜಿ.ಬಿ. ವಿಸಾಜಿಯವರೂ ಒಬ್ಬರು. ಅವರು ಕವಿಯಾಗಿ ಸಂಶೋಧನಕರಾಗಿ, ಸಂಪಾದಕರಾಗಿ, ಶರಣ ಪ್ರೇಮಿಯಾಗಿ ಇಲ್ಲಿ ಬಾಳಿದ್ದಾರೆ. ಅವರ ಶಿಷ್ಯ ಬಳಗ ಇಲ್ಲಿ ದೊಡ್ಡದಿದೆ.

ಆ ಮೂಲಕ ಕನ್ನಡ ಲೇಖಕರ ಹಿಂಡು ಕಟ್ಟಿ ಬೆಳೆಸಿದ್ದಾರೆ. ಹಾಗೂ 'ಮುಂಜಾವು', 'ಮುಂಜಾವಿನಿಂದ' ಮುಸ್ಸಂಜೆವರೆಗೆ, ಸಾಲುದೀಪ, ವಿಸಾಜಿಯವರ ಪ್ರಬಂಧಗಳು, ಚಿಂತನೆಗಳು ಮೊದಲಾದ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಕೋಹಿನೂರಿನವರಾದ ಇವರು ಭಾಲ್ಕಿಯಲ್ಲಿ ಬಂದು ಕನ್ನಡದ ಸೇವೆಯನ್ನು ಅನುಪಮರಾಗಿ ಮಾಡಿದ್ದಾರೆ. ಇಂಥ ವ್ಯಕ್ತಿಯ ಕುರಿತು ಅಭಿನಂದನ ಗ್ರಂಥ ಕನ್ನಡದ ದೀಪ, ಇದರಲ್ಲಿ ವಿಸಾಜಿಯವರನ್ನು ಕುರಿತು ೧೪ ಕವನಗಳು, ಅವರ

---

[2] ದೇಶಾಂಶ ಹುಡಗಿ – ಗುರುಪುತ್ರ – ೨೦೦೨ ಸಂಪಾದಕೀಯದಲ್ಲಿ – ಪು–IX.

[3] ದೇಶಾಂಶ ಹುಡಗಿ – ಕನ್ನಡ ದೀಪ – ೨೦೦೬ ಸಂಪಾದಕೀಯ – ಪು–VII.

ಚರಿತ್ರೆಯನ್ನು ಒಳಗೊಂಡ ೨೩ ಲೇಖನಗಳು ಹಾಗೂ ಅವರ ಸಾಹಿತ್ಯದ ಕೃತಿಗಳನ್ನು ಕುರಿತ ೧೭ ವಿಮರ್ಶಾ ಲೇಖನಗಳು ಇಲ್ಲಿವೆ. ವಿಸಾಜಿಯವರ ಶಿಷ್ಯರು, ಆತ್ಮೀಯರು, ಅಭಿಮಾನಿಗಳು, ಆಪ್ತಸ್ನೇಹಿತರು ಇಲ್ಲಿ ಲೇಖನಗಳನ್ನು ಬರೆದಿದ್ದು, ಅವು ಮೆಚ್ಚುವಂತಿವೆ. ವಿಸಾಜಿಯವರ ಈ ಅಭಿನಂದನಾ ಗ್ರಂಥದೊಂದಿಗೆ ಒಂದು ಪ್ರದೇಶದ ಸಾಂಸ್ಕೃತಿಕ ಬದುಕು ಹಾಗೂ ಸಾಹಿತ್ಯದ ಚರ್ಚೆಯೂ ಇಲ್ಲಿ ನಡೆದಿರುವುದನ್ನು ಮನಗಾಣಬಹುದು. ಉತ್ತಮ ಅಧ್ಯಾಪಕ, ಭಾಷಣಕಾರ, ಲೇಖಕರಾಗಿ ಸೇವೆ ಸಲ್ಲಿಸಿರುವ ವಿಸಾಜಿಯವರು ಆತ್ಮೀಯ ಸ್ನೇಹಿತರು, ಸಜ್ಜನರೂ ಆಗಿರುವುದನ್ನು ನಾವಿಲ್ಲಿ ಗುರುತಿಸಬಹುದಾಗಿದೆ. ಇದನ್ನು ಉತ್ತಮವಾಗಿ ಸಂಪಾದಿಸಿದ ಕೀರ್ತಿ ದೇಶಾಂಶ ಹುಡಗಿಯವರಿಗೆ ಸಲ್ಲುತ್ತದೆ.

ಹಾಗೆಯೇ 'ಸ್ನೇಹ ಜೀವಿ'ಯು ಶ್ರೀ ಶಂಭುಲಿಂಗ ವಾಲದೊಡ್ಡಿ ಅವರ ಅಭಿನಂದನ ಗ್ರಂಥ. ಇಂದಿನ ಮೂಢನಂಬಿಕೆ, ಅನಕ್ಷರತೆ, ಅತ್ಯಾಚಾರ, ಕೊಲೆ, ಸುಲಿಗೆ ಮುಂತಾದ ಸಾಮಾಜಿಕ ಸಮಸ್ಯೆಗಳನ್ನು ಇಂದಿನ ವ್ಯವಸ್ಥೆಯಲ್ಲಿ ಎತ್ತಿ ತೋರಿಸಿ ವಿರುದ್ಧ ದನಿ ಎತ್ತಿ ಜಾಗೃತಿ ಕಾರ್ಯ ಮಾಡುತ್ತಿರುವವರಲ್ಲಿ ಶಂಭುಲಿಂಗ ವಾಲದೊಡ್ಡಿಯವರೂ ಒಬ್ಬರು. ಇವರು ರಂಗಭೂಮಿ, ಬೀದಿ ನಾಟಕ, ಜಾನಪದ ಹಾಡುಗಾರಿಕೆ, ಸಂಗೀತ, ಶಿಕ್ಷಣ, ಸಾಕ್ಷರತಾ ಆಂದೋಲನ, ಸಮಾಜ ಸೇವೆ ಮೊದಲಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸುಮಾರು ೨೫ ವರ್ಷಗಳಿಗಿಂತ ಹೆಚ್ಚು ಕಾಲ ಸೇವೆ ಸಲ್ಲಿಸುತ್ತಿರುವುದು ಗಣನೀಯ ಸಂಗತಿ. ಸದಾ ಹಸನ್ಮೂಖಿಯಾಗಿರುವ ಈ ಸಂಗೀತ ಕಲಾವಿದರು ಧರಿನಾಡ ಕನ್ನಡ ಸಂಘದ ಕ್ರಿಯಾಶೀಲ ಸದಸ್ಯ ಮುಗಿದ ಕೈಗಳಿಂದ ಎಲ್ಲರನ್ನು ಸ್ವಾಗತಿಸುವ ವಿನಯಶಾಲಿ ಇವರನ್ನು ಕುರಿತ ಬೃಹತ್ ಸಂಪುಟ ಸ್ನೇಹ ಜೀವಿ ಇದರಲ್ಲಿ ವಾಲ್ದೊಡ್ಡಿಯವರನ್ನು ಕುರಿತು ೧೪ ಕವನಗಳು, ವಾಲದೊಡ್ಡಿಯವರನ್ನು ಕುರಿತ ವ್ಯಕ್ತಿಚಿತ್ರ ಲೇಖನಗಳು, ಜಾನಪದ ದರ್ಶನ ಮಾಡಿಕೊಂಡು, ೭ ಲೇಖನಗಳು, ರಂಗ ಸಂಗಮಕ್ಕೆ ಸಂಬಂಧಿಸಿದ ೫ ವಿದ್ವತ್‌ಪೂರ್ಣ ಲೇಖನಗಳು, ಸಂಗೀತ ಸುಧೆಯನ್ನು ಕುರಿತ ೩ ಲೇಖನಗಳು ಸಾಹಿತ್ಯ-ಶಿಕ್ಷಣ-ಚಿಂತನೆಗಳ ೯ ಲೇಖನಗಳು, ವಿವಿಧ ವ್ಯಕ್ತಿ ಚಿತ್ರಾವಳಿಯುಳ್ಳ ೨೩ ಲೇಖನಗಳಿದ್ದು, ೮ ಭಾಗಗಳನ್ನು ಈ ಸಂಪುಟವು ಒಳಗೊಂಡಿದೆ. ಒಟ್ಟು ೭೩ ಲೇಖನಗಳಿರುವ ಇದು ಬೃಹತ್ ಸಂಪುಟವಾಗಿದ್ದು, ತುಂಬಾ ಸುಂದರವಾಗಿ ಮೂಡಿಬಂದಿದೆ. ವಿಮರ್ಶೆ, ಸಂಶೋಧನೆ, ತೌಲನಿಕ ವಿಮೋಚನೆಯುಳ್ಳ ಇಲ್ಲಿಯ ಹಲವಾರು ಲೇಖನಗಳು ಚಿಂತನಾರ್ಹವಾಗಿದ್ದು, ಲೇಖಕರ ಗಂಭೀರವಾದ ಅಭ್ಯಾಸವನ್ನು ಎತ್ತಿ ತೋರಿಸುತ್ತವೆ.

ಇಲ್ಲಿಯ ಎಲ್ಲ ಸಂಪಾದನೆಗಳು ವೈವಿಧ್ಯಮಯವಾಗಿರುವುದರಿಂದ ಹಾಗೂ ಆ ಕಾರ್ಯವು ತುಂಬಾ ವಿಶಾಲವಾಗಿರುವುದರಿಂದ ಸಂಪಾದನಾ ಕಾರ್ಯ ಕಠಿಣವೆನಿಸುತ್ತದೆ. ಸೃಜನ ಬರಹಕ್ಕಿಂತ ಸಂಪಾದಿತ ಕೃತಿಯನ್ನು ಸಿದ್ಧಪಡಿಸುವಲ್ಲಿ ದೇಶಾಂಶರ ವಿಶೇಷ ಪರಿಶ್ರಮ ಬಳಕೆಯಾಗಿರುವುದು ಇಲ್ಲಿ ಸ್ಪಷ್ಟವಾಗುತ್ತದೆ. ಪ್ರತಿಭೆಯ ಜೊತೆಗೆ, ಆಳವಾದ ಅನುಭವ, ಶಾಸ್ತ್ರಜ್ಞಾನ, ವಿಮರ್ಶಕ ಬುದ್ಧಿ, ಚಿಕಿತ್ಸಕ ಶಕ್ತಿ ಈ ಕಾರ್ಯದಲ್ಲಿರುವುದನ್ನು ಗಮನಿಸಿದರೆ ಸ್ವತಃ ಕವಿ ಹಾಗೂ ಪದ್ಯ ಲೇಖಕರಾಗಿರುವ ದೇಶಾಂಶ ಹುಡಗಿಯವರ ಬಹುಕಾಲದ ಅಧ್ಯಯನದ ಫಲ ಹಾಗೂ ಅವರ ಶ್ರದ್ಧೆಯಿಂದ ಕೂಡಿದ ಪರಿಶ್ರಮ ಇಲ್ಲಿಯ ಸಂಪಾದನೆಗಳಲ್ಲಿ ಕಂಡು ಬರುವುದನ್ನು ನಾವು ಗಮನಿಸಬಹುದು.

### ೨-೨ ವ್ಯಕ್ತಿ ಚಿತ್ರಣ ಸಾಹಿತ್ಯ:

ದೇಶಾಂಶ ಹುಡಗಿಯವರು ೧. ಗ್ರಾಮ ಶಿಲ್ಪಿಗಳು, ೨. ನಾ ಕಂಡ ನನ್ನವರು, ೩. ಬೀದರ ಜಿಲ್ಲೆಯ ಬರಹಗಾರರು ಹಾಗೂ ೪. ಬೀದರ ಜಿಲ್ಲೆಯ ತತ್ವಪದಕಾರರು ಎಂಬ ನಾಲ್ಕು 'ವ್ಯಕ್ತಿ ಚಿತ್ರಣ' ಕೃತಿಗಳನ್ನು ರಚಿಸಿದ್ದಾರೆ. ಇವರು ಚಿತ್ರಿಸಿದ ವ್ಯಕ್ತಿಗಳಲ್ಲಿ ಸಾಹಿತ್ಯಿಕ, ಐತಿಹಾಸಿಕ, ಪೌರಾಣಿಕ ರಾಜಕೀಯ ಮತ್ತು ಸಾಮಾಜಿಕ ರಂಗದ ವ್ಯಕ್ತಿಗಳಿದ್ದಾರೆ.

ನವೋದಯ ಮಾರ್ಗದ ಕಾವ್ಯ ಪರಂಪರೆಯಲ್ಲಿ ಅಗಲಿದ ಸಾಹಿತಿ, ನಾಯಕರಾದಿಯಾಗಿ ವ್ಯಕ್ತಿ ಮೌಲ್ಯಗಳಿಗೆ ಕವನದ ಮುಖಾಂತರ ಶ್ರದ್ಧಾಂಜಲಿ ಸಲ್ಲಿಸುವ ಒಂದು ಪರಂಪರೆ ಆರಂಭವಾಯಿತು. ಆ ನಿಟ್ಟಿನಲ್ಲಿ ದೇಶಾಂಶರು ಕೆಲವು ವಚನಗಳನ್ನು ರಚಿಸಿದರು. ಸಮಾಜಮುಖಿ ವ್ಯಕ್ತಿತ್ವವುಳ್ಳ ಈ ಕವಿಗೆ ಸಮಕಾಲೀನ ಕವಿ, ಲೇಖಕ, ಲೇಖಕಿಯರ ಕುರಿತು ಆಸಕ್ತಿ ಮೂಡಿರುವುದು ಸಹಜವೆನ್ನಬಹುದು. ಹಾಗೆ ಅವರ ಕವಿತೆಗಳಲ್ಲಿ ರೂಪಿತಗೊಂಡವರೆಂದರೆ ಮೊದಲು ಶರಣರು ಬಸವಾದಿ ಶರಣರನ್ನು ತುಂಬ ಗೌರವದಿಂದ ಕಾಣುವ ಕವಿಯು ಅವರ ಜೀವನ ಮೌಲ್ಯಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ನಡೆದಿದ್ದಾರೆ. ಅಂತೆಯೇ ಅವರು–

'ಶರಣರೆಂದರೆ ಊದು ಬತ್ತಿಯಲ್ಲ, ದೂಪಾರತಿಯಲ್ಲ
............ ಕಸ್ತೂರಿ ಶ್ರೀಗಂಧವಲ್ಲ
ಅವರು ಇದ್ದೂ ಇಲ್ಲದಂತಿರುವ
ಎಲ್ಲರೆದೆಯ ಪ್ರಾಣವಾಯುವೆಂದು' (ವ ೧೨೨)

ತಿಳಿಸುತ್ತಾರೆ. ಶಿವಶರಣರ ತಾತ್ವಿಕ ಸತ್ಯದ ಹೊಚ್ಚ ಹೊಸ ಮಗ್ಗುಲನ್ನು ನೋಡಿ ಆ ಸ್ಫೂರ್ತಿಯಿಂದ ಹಾಡಿದವರು ದೇಶಾಂಶರು. ಅವರ ಈ ಮೇಲಿನ ವಚನಗಳಲ್ಲಿ ಬಂದಿರುವ ಉದ್ಗಾರಗಳು ಅನುಭಾವದಿಂದ ಉಕ್ಕಿ ಬಂದಂಥವುಗಳಾಗಿವೆ. ಇದೇ ಕಾರಣಕ್ಕಾಗಿ ಅವರು ವಚನಕಾರರು ಎಂಬ ಶಬ್ದಕ್ಕೆ ಅಪೂರ್ವ ಧ್ವನಿ ಸಾಮರ್ಥ್ಯವನ್ನು ತಂದುಕೊಟ್ಟರು. 'ವಚನ ಪಾಲ ಕಠಿಣಾತಿ ಕಠಿಣ' ವಚನ ನಿಭಾಯಿಸುವವರೇ ವಚನಕಾರರು ಎಂದು ಹೇಳಿರುವುದು ಆ ಎಲ್ಲಾ ಶರಣರ ವ್ಯಕ್ತಿತ್ವ ದರ್ಶನವನ್ನು ಮೂಡಿಸುವ ದರ್ಪಣದಂತಿದೆ ಎನ್ನಬಹುದು.

**ಗ್ರಾಮ ಶಿಲ್ಪಿಗಳು:**

ದೇಶಾಂಶ ಹುಡಗಿಯವರ ಮೊದಲ ಕೃತಿಯಾಗಿದ್ದು, ೧೯೮೦ ರಲ್ಲಿ ಪ್ರಕಟಗೊಂಡಿದೆ. ಇಂದು ಹಳ್ಳಿಗಳ ಸಮಸ್ಯೆಗೆ ಪರಿಹಾರ ಹಳ್ಳಿಗಳಲ್ಲಿಯೇ ಹೊಸ ಕಾಯಕತ್ವ ಉದಿಸದೆ ದೊರೆಯಲಾರದು. ಹೊರಗಿನವರು ಬಂದು ತಮ್ಮ ಹಳ್ಳಿಗಳ ಉದ್ಧಾರ ಮಾಡುವುದು ಅಸಾಧ್ಯದ ಸಂಗತಿ. ಎಷ್ಟೋ ಜನಗಳು ಹಳ್ಳಿಯ ಉದ್ಧಾರಕ್ಕಿಂತ ಹಳ್ಳಿಗರ ನಿರಕ್ಷರತೆ, ನಿಸ್ಸಹಾಯಕತೆ, ಬಡತನ, ಅಜ್ಞತೆ, ಅಂಧ ವಿಶ್ವಾಸಗಳನ್ನು ದುರುಪಯೋಗ ಪಡಿಸಿಕೊಂಡು ಅವರ ಮೂಲಕ ತಮ್ಮ ಉದ್ಧಾರ ಮಾಡಿಕೊಳ್ಳುವವರೇ ಹೆಚ್ಚು. ಇಂಥ ಸಂದರ್ಭದಲ್ಲಿ "ಹುಡಗಿ ಗ್ರಾಮದ ಹೊಸ ಹುಟ್ಟಿಗೆ ಕಾರಣರಾದವರ ಕರ್ತೃತ್ವ ಚಿತ್ರಣವೇ" ಗ್ರಾಮ ಶಿಲ್ಪಿಗಳು ಕಿರು ಹೊತ್ತಿಗೆಯ ಉದ್ದೇಶ. ಇದನ್ನು ಉದಯೋನ್ಮುಖ ಬರಹಗಾರರಾದ ದೇಶಾಂಶರು (ಕೆ.ಜಿ. ಮಾಶೆಟ್ಟಿಯೊಂದಿಗೆ) ಸಮರ್ಪಕವಾಗಿ ಸಾಧಿಸಿದ್ದಾರೆ. ಗ್ರಾಮ ಶಿಲ್ಪಿಗಳು ಎಂಬ ಹೊತ್ತಗೆಯ ಹೆಸರೇ ಸೂಚಿಸುವಂತೆ ಇಲ್ಲಿ ಹುಡಗಿಯನ್ನು ಆದರ್ಶ ಗ್ರಾಮವನ್ನಾಗಿ ಪರಿವರ್ತಿಸಿದ ಹನ್ನೆರಡು ರೂವಾರಿಗಳ ರೇಖಾಚಿತ್ರಗಳು ಸಂಗ್ರಹಿತವಾಗಿವೆ[4]. ಅವರಲ್ಲಿ ದೇಶಾಂಶರಿಂದ ವ್ಯಕ್ತಗೊಂಡವರೆಂದರೆ, ಸಮಾಜ ಸುಧಾರಕ ಶಾಮರಾವ ಪಾಟೀಲ, ದಿಃ ವೆಂಕಟರಾವ ಕುಲಕರ್ಣಿ, ನಾಯಬ ಸುಬೇದಾರ, ಜಮೀಲ್, ರಾಷ್ಟ್ರಪತಿ ವಿಜೇತ, ರಾಚಪ್ಪ ಸಿ. ಪಾಟೀಲ, ದಿಃ ಮಸ್ಲೆಹೊದ್ದಿನ್ ಮೊಖ್ತೆದಾರ, ಪಂಚಪರಮೇಶ್ವರರೆನಿಸಿದ ಶ್ರೀ ದೇವೆಂದ್ರಪ್ಪನವರು. ಇವರಲ್ಲಿಯ ಕೇಂದ್ರ ವ್ಯಕ್ತಿ ಸರಪಂಚ ದೇವೆಂದ್ರಪ್ಪನವರು. ಅವರ ವ್ಯಕ್ತಿ ಚಿತ್ರ ಚಿತ್ತಾಕರ್ಷಕವಾಗಿ ಬಂದಿರುವುದನ್ನು ಸಿದ್ದಯ್ಯ ಪುರಾಣಿಕರು ತಿಳಿಸುತ್ತಾರೆ. ಇನ್ನೂಳಿದವರೂ

[4] ಸಿದ್ದಯ್ಯ ಪುರಾಣಿಕ – ಗ್ರಾಮ ಶಿಲ್ಪಿಗಳು – ಮುನ್ನುಡಿಯಲ್ಲಿ – ಪು–ಳ.

ಒಂದೊಂದು ಕ್ಷೇತ್ರದಲ್ಲಿ ಮರೆಯಲಾರದ ಸೇವೆಯನ್ನು ಸಲ್ಲಿಸಿ ಕೃತಾರ್ಥರಾಗಿರುವ ಕ್ರಿಯಾವೀರರು, ಇವರೆಲ್ಲರೂ ಮಾಡಿದ ಕಾರ್ಯ ಯಾವ ಶಾಸಕನೂ ಮಾಡಿದ ಕಾರ್ಯಕ್ಕಿಂತಲೂ ಕಡಿಮೆಯಾದುದಲ್ಲ. ಅಷ್ಟೇ ಅಲ್ಲ ಅನೇಕ ಆಷಾಢ ಭೂತಿ ಶಾಸನಕಾರ ಸಚಿವರಿಗಿಂತಲೂ ಹೆಚ್ಚಿನ, ಹಿರಿದಾದ, ನೆನಪಿಡಬೇಕಾದ ಉಪಯುಕ್ತ ಕಾರ್ಯಗಳನ್ನು ಇವರು ಮಾಡಿ ಧನ್ಯರಾಗಿರುವುದನ್ನು ದೇಶಾಂಶ ಹುಡಗಿಯವರು ಸೊಗಸಾಗಿ ಚಿತ್ರಿಸಿದ್ದಾರೆ.

ದೇಶದಲ್ಲಿ ನೈತಿಕ ಅಧಃಪತನ, ಭ್ರಷ್ಟಾಚಾರದ ವ್ಯವಸ್ಥೆ, ಸ್ವಾರ್ಥತನದ ಪಿಡುಗು, ಡಾಂಭಿಕ ದೇಶಭಕ್ತಿ, ಘೋಷಣೆಗಳ ಹಾವಳಿ, ಪಕ್ಷಾಂತರದ ರೋಗ ಹೆಚ್ಚಾಗಿರುವ ಸಂದರ್ಭಗಳಲ್ಲಿ, ದೇವೇಂದ್ರಪ್ಪ ಮೊದಲಾದವರು ಇದೇ ದೇಶದ ಒಂದು ಸಾಮಾನ್ಯ ಹಳ್ಳಿಯಲ್ಲಿದ್ದುಕೊಂಡು ಇದ್ದದ್ದರಲ್ಲಿಯೇ ಸಂತೋಷದ ವಾತಾವರಣವನ್ನು ತಂದು ನಿಲ್ಲಿಸಿದವರು. ಗ್ರಾಮ ನಿರ್ಮಾಣ ಮಾಡುವವರಿಗೆ ಈ ಕೃತಿಯಲ್ಲಿಯ ವ್ಯಕ್ತಿ ಚಿತ್ರಣವೆಂದು ಮಾದರಿಯಾಗಿ ನಿಲ್ಲುತ್ತದೆ ಎನ್ನಬಹುದು.

## ನಾ ಕಂಡ ನನ್ನವರುಃ

ಈ ಕೃತಿಯ ೧೯೯೫ ರಲ್ಲಿ ಪ್ರಕಟಗೊಂಡಿದೆ. ಪ್ರಸ್ತುತವಾದ ಈ ಪುಸ್ತಕದಲ್ಲಿ ದೇಶಾಂಶ ಹುಡಗಿಯವರ ಒಡನಾಟದಲ್ಲಿ ಬಂದು ಹೋಗಿರುವ ೩೦ ಜನರ ವ್ಯಕ್ತಿ ಚಿತ್ರಣವಿದೆ. ಕವಿಯು ಹೇಳುವಂತೆ 'ನಾ ಕಂಡ ನನ್ನವರು' ಎಂದರೆ ನಾನು ಕಂಡು ಅರಿತು ಅನುಭವಿಸಿದ ಎಲ್ಲ ವ್ಯಕ್ತಿಗಳು ಎಂದು ಅರ್ಥವಾಗುತ್ತದೆ. ಈ ರೀತಿ ಸಂಪರ್ಕಕ್ಕೆ ಬಂದ ಎಲ್ಲ ವ್ಯಕ್ತಿಗಳ ಪರಿಚಯಕೊಡುವುದು ಅಥವಾ ಉತ್ತರ ಕರ್ನಾಟಕ ಮತ್ತು ಜನದನಿಯಲ್ಲಿ ಪ್ರಕಟಿಸಿದ ಎಲ್ಲಾ ವ್ಯಕ್ತಿ ಚಿತ್ರಗಳ ಸಂಕಲನಗೊಳಿಸುವುದು ಅಸಾಧ್ಯದ ಮಾತು. ಅದು ನನ್ನ ಆರ್ಥಿಕ ಶಕ್ತಿಗೆ ನಿಲುಕಲಾರದ ತುತ್ತು. ಇದರಿಂದಾಗಿ ಹಲವರನ್ನು ಕೈ ಬಿಡಬೇಕಾಯಿತು[5]. ಎಂಬುದನ್ನು ಇಲ್ಲಿ ಅರಿಯಬಹುದು.

ಈ ಕೃತಿಯಲ್ಲಿ ಗಮನಿಸಬಹುದಾದ ವೈಶಿಷ್ಟವೆಂದರೆ ಪುಸ್ತಕ ಓದಿದ ಕೂಡಲೇ ನಮ್ಮ ಗಮನ ಸೆಳೆಯುವುದು ದೇಶಾಂಶರ ದೊಡ್ಡ ಗುಣ. ನಾವು ನೂರಾರು ಜನರನ್ನು ಭೇಟಿಯಾಗಬಹುದು. ಪರಿಚಯ ಗಳಿಸಬಹುದು. ಆದರೆ ಅವರಲ್ಲಿರುವ ಅಪರೂಪದ ಗುಣಗಳನ್ನು ಬಿಚ್ಚಿ ಹೇಳುವುದು ಸಾಮಾನ್ಯವಾಗಿ ವಿರಳ[6]. ಎಂಬುದನ್ನು ನಾವಿಲ್ಲಿ ಗಮನಿಸಿದರೆ ದೇಶಾಂಶರು ಮಾಡಿರುವ ಈ

---

[5] ದೇಶಾಂಶ ಹುಡಗಿ–ನಾ ಕಂಡ ನನ್ನವರು – ನನ್ನ ನುಡಿ– ಪು–೯.

[6] ಡಾ. ವೀರಣ್ಣ ದಂಡೆ – ನಾ ಕಂಡ ನನ್ನವರು – ಮುನ್ನುಡಿಯಲ್ಲಿ – ಪು–೫.

ಕಾರ್ಯ ಎಂಥಹದು ಎಂಬುದನ್ನು ಅರಿಯಬಹುದು. ಈ ೩೦ ಜನರ ವ್ಯಕ್ತಿ ಚಿತ್ರಣ ಮಾಡುವಲ್ಲಿ ಕವಿಯು ತೋರಿರುವ ಪ್ರೀತಿ ಬಹು ಮುಖ್ಯವಾಗಿದೆ. ಎಲ್ಲರ ಬಗೆಯೂ ಅಷ್ಟೇ ವಿಶ್ವಾಸದಿಂದ ಬರೆಯುವ ದೇಶಾಂಶರಿಗೆ ಎಲ್ಲರನ್ನು ತೆರೆದ ಮನಸ್ಸಿನಿಂದ ಕಾಣುವ ಹಾಗೂ ಅವರ ಗುಣಗಳನ್ನು ಬಾಯಿ ಬಿಚ್ಚಿ ಹೇಳುವ ಅಪರೂಪದ ಗುಣವಿರುವುದು ಇಲ್ಲಿ ಎದ್ದು ಕಾಣುತ್ತದೆ.

ಇದರಲ್ಲಿ ಜಾನಪದ ಜೀವ–ಜೀವಾಳವೆನಿಸಿರುವ ಸಿಂಪಿ ಲಿಂಗಣ್ಣ, ಜ್ಞಾನ ಪೀಠ ಪ್ರಶಸ್ತಿ ವಿಜೇತ ಶಿವರಾಮ ಕಾರಂತ, ಹುಕ್ಕೇರಿ ಬಾಳಪ್ಪ ಹಾಗೂ ಸೋನ ಕಾಂಬಳೆಯಂತಹ ಹಾಡುಗಾರರೂ, ಗುರುಪಾದಪ್ಪ, ಮಹಿಮಾಕರರಂತಹ ಕನ್ನಡಾಭಿಮಾನಿಗಳು, ತಾಂತ್ರಿಕ ಶಿಕ್ಷಣವೇತ್ತರು, ಅಧ್ಯಾಪಕರೂ, ಕಲಾಕಾರರು, ಬಂಡಾಯಗಾರರು, ಸ್ವಾಮಿಗಳು ಹೀಗೆ ವೈವಿಧ್ಯಮಯವಾದ ಜನರ ಪರಿಚಯ ಇಲ್ಲಿ ನಮಗೆ ದೊರೆಯುತ್ತದೆ. ಇವರಲ್ಲಿ ಎರಡ್ಮೂರು ಜನರನ್ನು ಬಿಟ್ಟರೆ ಉಳಿದವರೆಲ್ಲರೂ ಬೀದರ ಜಿಲ್ಲೆಯವರೇ. ಶರಣ ಚೇತನ ಸ್ವರೂಪಿಯಾದ ಶ್ರೀ ಭಾಲ್ಕಿ ಹಿರೇಮಠದ ಚನ್ನಬಸವ ಪಟ್ಟದ್ದೇವರ ಕುರಿತು ವ್ಯಕ್ತಿತ್ವ ಚಿತ್ರಣವು ತುಂಬಾ ಅಪರೂಪದ್ದೆನಿಸುತ್ತದೆ. ಒಟ್ಟಿನಲ್ಲಿ ಗಮನಿಸಬಹುದಾದರೆ ದಂಡೆಯವರು ಅಭಿಪ್ರಾಯ ಪಡುವಂತೆ ಹುಡಗಿಯವರ ಈ ಪುಸ್ತಕವು ಅವರೊಬ್ಬ ಒಳ್ಳೆಗದ್ಯ ಬರಹಗಾರರು ಎಂಬುದನ್ನು ಅಷ್ಟೇ ಅಲ್ಲ. ಒಳ್ಳೆಯ ಹೃದಯವಂತರು ಎಂಬುದನ್ನು ಕೂಡ ತೆರೆದು ತೋರಿಸುತ್ತದೆ[7]. ಎಂಬುದು ಒಪ್ಪುವ ಮಾತು.

## ಬೀದರ ಜಿಲ್ಲೆಯ ಬರಹಗಾರರುಃ

ಇದು ದೇಶಾಂಶ ಹುಡಗಿಯವರ ವ್ಯಕ್ತಿ ಚಿತ್ರಣದ ಕೃತಿಯಾಗಿದ್ದು, ಬೀದರ ಜಿಲ್ಲೆಯ ಹಿರಿಯ ಕಿರಿಯ ಮತ್ತು ಉದಯೋನ್ಮುಖ ಬರಹಗಾರರನ್ನು ಕುರಿತು ಒಂದೇ ಗ್ರಂಥದಲ್ಲಿ ಪರಿಚಯಿಸಲು ಹೊರಟ ಮೊದಲನೆಯ ಪ್ರಯತ್ನವಿದು. ಇಲ್ಲಿ ಪರಿಚಯಿಸಲಾಗಿರುವ ಬರಹಗಾರರನ್ನು ಕೃತಿ ಪ್ರಕಟಿಸಿದವರು. ಪತ್ರಕರ್ತರು ಮತ್ತು ಬಿಡಿ ಬರಹಗಾರರು ಎಂದು ಮೂರು ಭಾಗಗಳಲ್ಲಿ ವಿಂಗಡಿಸಿ ಬರೆಯಲಾಗಿದೆ. ಬೀದರ ಜಿಲ್ಲೆಯಲ್ಲಿ ಹುಟ್ಟಿ ಬೆಳೆದು, ಇಲ್ಲೇ ಇದ್ದು ಇಲ್ಲವೆ ಇತರ ಕಡೆಯಿಂದ ಇಲ್ಲಿ ಬಂದು ವಾಸಿಸಿ, ಅಥವಾ ಇಲ್ಲಿಯವರು ಬೇರೆಡೆ ಹೋಗಿ ವಾಸಿಸಲು ಬರೆಯಲು ಪ್ರಾರಂಭಿಸಿದವರನ್ನೆಲ್ಲ ಈ ಜಿಲ್ಲೆಯ ಬರಹಗಾರರೆಂದು ಪರಿಗಣಿಸಲಾಗಿರುವುದೊಂದು ಇಲ್ಲಿ ವಿಶೇಷತೆ ಎನ್ನಬಹುದು. ಇರುವ ಇನ್ನೂ

[7] ಡಾ. ವೀರಣ್ಣ ದಂಡೆ – ನಾ ಕಂಡ ನನ್ನವರು – ಮುನ್ನುಡಿಯಲ್ಲಿ.

ಅನೇಕ ಲೇಖಕರು ಈ ಕವಿಯ ಗಮನಕ್ಕೆ ಬರದೇ ಹೋಗಿರುವುದನ್ನು ನಾವಿಲ್ಲಿ ಕಾಣಬಹುದಾದರೂ, ಎಲ್ಲ ಇಲ್ಲಿಯ ವ್ಯಕ್ತಿ ಪರಿಚಯಗಳು ಪೂರ್ಣವೆಂದೂ ನಂಬಲಾಗದು. ತಮ್ಮದೇ ಆದ ಮಿತಿಯಲ್ಲಿ ನಿರೂಪಗೊಂಡಿರುವ ಇಲ್ಲಿಯ ಸು. ೨೦೦ ಜನರ ಪರಿಚಯವು ಲೇಖಕರ ಒಂದು ಮಿತಿಯಲ್ಲಿಯೇ ಸಾಗಿದ್ದು, ಓದುಗರಿಗೆ ಈ ಕೃತಿಯೊಂದು ಪರಿಚಯಾತ್ಮಕವಾದ ವಿಳಾಸಗಳ ಕೈಪಿಡಿಯಾಗಿ ನಿಂತಿದೆ ಎನ್ನಬಹುದು.

## ಬೀದರ ಜಿಲ್ಲೆಯ ತತ್ವಪದಕಾರರು:

ಬೀದರ ಜಿಲ್ಲೆಯಲ್ಲಿ ತತ್ವಪದ ಸಾಹಿತ್ಯವು ಹೇರಳವಾಗಿ ದೊರೆಯುತ್ತಿದ್ದು, ಅದು ಈಗಲೂ ಭಂಡಾರೋಪಾದಿಯಲ್ಲಿ ಕಾಣಸಿಗುತ್ತದೆ. ಅಂಥ ತತ್ವಪದ ರಚನೆಕಾರರನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಕೊಡುವ ಈ ಕೃತಿಯನ್ನು ದೇಶಾಂಶ ಹುಡಗಿಯವರು ೧೯೯೪ ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾದ ಪ್ರಸಾರಂಗದಿಂದ ಪ್ರಕಟಗೊಳಿಸಿದ್ದಾರೆ. ಬೀದರ, ಹುಮನಾಬಾದ, ಭಾಲ್ಕಿ, ಔರಾದ ಹಾಗೂ ಬಸವಕಲ್ಯಾಣ ತಾಲೂಕಿನ ಹಲವು ತತ್ವಪದಕಾರರನ್ನು ವ್ಯಕ್ತಿ ಚಿತ್ರಣ ಹಾಗೂ ಅವರ ತತ್ವಪದ ಸಾಹಿತ್ಯವನ್ನು ಕುರಿತು ತಿಳಿಸುವ ಈ ಪುಸ್ತಿಕೆಯು ಆಕಾರದಲ್ಲಿ ಚಿಕ್ಕದಾಗಿದ್ದರೂ ಹಿರಿಮೆಯಲ್ಲಿ ಬಹು ಮುಖ್ಯವಾಗುತ್ತದೆ ಎನ್ನಬಹುದು. ಆಡು ನುಡಿ ಕನ್ನಡದಲ್ಲಿ ರಚಿತವಾಗಿರುವ ಈ ಜಿಲ್ಲೆಯ ತತ್ವಪದಗಳ ರಚನೆಕಾರರೆಂದರೆ, ಮಾಣಿಕಪ್ರಭು, ನಿಜಲಿಂಗ ಭದ್ರೇಶ್ವರರು, ಮಡಿವಾಳ ಶೆಟ್ಟಿ ಕೆಂಚಾ, ಬಾಡ ಮದನಸಾ, ಕೊಳ್ಳೂರು ವೀರಭದ್ರಪ್ಪ, ಕೊಳ್ಳೂರ ಹುಸನಾಸಾಬ, ಮಂಗಲ ನನ್ನಾಸಾಬ, ಮರಕುಂದಿ ಬಸವಣಪ್ಪ, ಆಣದೂರಿನ ಜವರ ಸಾಬ, ಬೋರಗಿಯ ರಹಿಮಾನ ಸಾಬ, ಸಿದ್ದಪ್ರಭು, ಶಿಲ್ಲಪ್ಪ ಕವಿ, ಮಂಕಾಲ ಹಣಮಂತಪ್ಪ, ಪಂಚಶೀಲ ಗವಾಯಿ ಕಾಶಿನಾಥ, ಪಂಚಾಕ್ಷರಿ ಗೌಡಗಾಂವ ಬಾಬಶೆಟ್ಟಿ, ಮಂಠಾಳಕರ ಮೊದಲಾದವರನ್ನು ಇಲ್ಲಿ ಬೀದರ ಜಿಲ್ಲೆಯ ತತ್ವಪದಕಾರರೆಂದು ಗುರುತಿಸಿ ಪರಿಚಯಿಸಲಾಗಿದೆ. ಇವರಲ್ಲಿ ಕೆಲವರು ಕನ್ನಡದೊಂದಿಗೆ ಉರ್ದುವನ್ನು ಶ್ಲೋಕ ರೀತಿಯಲ್ಲಿ, ಕವಿತೆಗಳಲ್ಲಿ ಬಳಸಿ, ರಾಜ ಭಾಷೆಗೆ ಗೌರವ ತೋರಿಸಿದ್ದು ಕಂಡು ಬರುತ್ತಿದ್ದು, ಅವರ ರಚನೆಗಳನ್ನು ಅಲ್ಲಲ್ಲಿ ಉದಾಹರಿಸಲಾಗಿದೆ. ಬೀದರ ಜಿಲ್ಲೆಯ ತತ್ವಪದ ಸಾಹಿತ್ಯಕ್ಕೆ ತನ್ನದೇ ಆದ ಕಾಣಿಕೆ ನೀಡಲಿರುವ ಈ ಕೃತಿಯು ಒಂದು ವ್ಯಕ್ತಿಚಿತ್ರಣದ ಕೃತಿಯೂ ಎನಿಸುತ್ತಿದೆ.

## ೨-೩ ಅನುವಾದ ಸಾಹಿತ್ಯ:

ಅಪಾರವಾದ ಜಗತ್ತಿನ ಜ್ಞಾನ ಸಂಪತ್ತು ಅನುವಾದದ ಮೂಲಕ ದೊರೆಯುತ್ತದೆಯಂತೆ. ಭಾಷೆ, ಸಂಸ್ಕೃತಿಗಳ ವಿನಿಮಯವನ್ನು ಅನುವಾದ ಕಾರ್ಯವು ಯಶಸ್ವಿಯಾಗಿ ನಿರ್ವಹಿಸುತ್ತದೆ. ಸೃಷ್ಟಿಯ ಪುನರ್ ಸೃಷ್ಟಿ ಎಂದು ಕರೆಯಿಸಿಕೊಳ್ಳುವ ಅನುವಾದವು ಮೂಲ ಕೃತಿಯಷ್ಟೇ ಮನ್ನಣೆ ಪಡೆಯುತ್ತವೆ. ನಿಜವಾದ ಅನುವಾದವೆಂದರೆ, ವಸ್ತು-ರೀತಿ-ಶೈಲಿಗಳ ದೃಷ್ಟಿಯಿಂದ ಅದು ಮೂಲಕ್ಕೆ ಹತ್ತಿರವಾಗಿದ್ದು, ಪರಕಾಯ ಪ್ರವೇಶ ಮಾಡಿದಂತೆ ಮೂಲದ ಸೌಂದರ್ಯವನ್ನು ಒಳಗೊಂಡಿರಬೇಕು. ಈ ಹಿನ್ನೆಲೆಯಲ್ಲಿ ಅನುವಾದದಿಂದ ಇನ್ನೊಂದು ಭಾಷಾ ಸಾಹಿತ್ಯದ ಸೊಬಗನ್ನು ಅರ್ಥೈಸಿಕೊಳ್ಳಬಹುದಾಗಿದೆ.

ಬೀದರ ಜಿಲ್ಲೆಯಲ್ಲಿ ಅನೇಕ ಕವಿಗಳು 'ಅನುವಾದ ಸಾಹಿತ್ಯ'ವನ್ನು ಸೃಷ್ಟಿಸಿದ್ದಾರೆ. ಬಾಲಚಂದ್ರ ಜಯಶೆಟ್ಟಿ, ಕಾಶಿನಾಥ ಅಂಬಲಗೆ, ಬಂಡೆಪ್ಪಾ ಖೂಬಾ, ವೀರೇಂದ್ರ ಸಿಂಪಿ ಮೊದಲಾದವರ ಸಾಲಿನಲ್ಲಿ ನಿಲ್ಲಬಲ್ಲವರು ಈ ದೇಶಾಂಶ ಹುಡಗಿಯವರು. ದೇಶಾಂಶರು ಪ್ರಾಥಮಿಕ ಶಿಕ್ಷಣದಿಂದಲೇ ಉರ್ದು, ಹಿಂದಿ, ಮರಾಠಿ ಹಾಗೂ ಕನ್ನಡ ಭಾಷೆಗಳನ್ನು ಕಲಿತವರು. ಅವರ ಶಿಕ್ಷಣ ಮಾಧ್ಯಮವು ಉರ್ದು ಹಾಗೂ ಮರಾಠಿಯಲ್ಲಿಯೇ ಆಗಿದೆ. ಹೀಗಾಗಿ ಹಿಂದಿ, ಉರ್ದು, ಮರಾಠಿ ಭಾಷೆಯ ಬಾಲಿತ್ವವನ್ನು ಕಂಡು ಹಿಗಿದ್ದೂ ಇದೆ. ಅವರ ಸಾಹಿತ್ಯದ ಅಂಗಾಂಗದಲ್ಲಿ ಹಲವಾರು ಉರ್ದು, ಮರಾಠಿ ಹಾಗೂ ಹಿಂದಿ ಮಿಶ್ರಿತ ಪದಗಳ ಬಳಕೆಯಿರುವುದನ್ನು ಗಮನಿಸಬಹುದಾಗಿದೆ. ಅವರ ಅನುವಾದದ ರೀತಿಯನ್ನು ಅರಿಯಲು ನಾವು ಅವರ ಆಧ್ಯಾತ್ಮವಾದಿ ವಿಶ್ವವಿಭೂತಿ ಮಹಾತ್ಮಾ ಬಸವೇಶ್ವರರು ಎಂಬ ಅನುವಾದ ಕೃತಿಯನ್ನು ಗಮನಿಸಬೇಕಾಗುತ್ತದೆ. ಮೂಲ ಹಿಂದಿ ಭಾಷೆಯ ಡಾ. ಭಗವಾನದಾಸ ತಿವಾರಿಯವರ ಈ ಕೃತಿಯನ್ನು ದೇಶಾಂಶ ಹುಡಗಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ.

ಖ್ಯಾತ ಸಂಶೋಧಕರು, ಶಿಕ್ಷಣ ತಜ್ಞರು, ತತ್ವಭೂಷಣರು ಸಾಹಿತ್ಯ ಮಹೋಪಾಧ್ಯಾಯರೂ ಎನಿಸಿರುವ ಭಗವಾನದಾಸ ತಿವಾರಿಯವರು ಬಸವ ಮಾರ್ಗ ಪತ್ರಿಕೆಯ (ಬೆಂಗಳೂರು) ಸಂಪಾದಕರಾಗಿ, ಮುಂಬೈಯಲ್ಲಿಯ ಹಿಂದಿ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದವರು. ಸುಮಾರು ೩೫ ಕ್ಕಿಂತ ಹೆಚ್ಚು ಗ್ರಂಥಗಳನ್ನು ಅವರು ಮರಾಠಿ ಹಾಗೂ ಹಿಂದಿ ಭಾಷೆಯಲ್ಲಿ ರಚಿಸಿದ್ದಾರೆ. ಅವರೊಬ್ಬ ಶ್ರೇಷ್ಠ ಅನುವಾದಕರೂ ಎನಿಸಿದ್ದವರು. ಹಿಂದಿಯಲ್ಲಿ ಗದ್ಯಕಾವ್ಯ ರಚನೆಗಾಗಿ ಮತ್ತು ಶ್ರೀ ಸಮರ್ಥ ರಾಮದಾಸರ ದಾಸಬೋಧೆಯನ್ನು

ಮರಾಠಿಯಿಂದ ಹಿಂದಿಗೆ ಅನುವಾದಿಸಿದಕ್ಕಾಗಿ ಅವರು ರಾಷ್ಟ್ರ ಪ್ರಶಸ್ತಿಯನ್ನು ಪಡೆದಿದ್ದಾರೆ[8]. ಅವರು ಕರ್ನಾಟಕದಲ್ಲಲ್ಲದೆ ಬೆಂಗಳೂರಿನಿಂದ ದಿಲ್ಲಿಯವರೆಗೆ ಬಸವ ಸಾಹಿತ್ಯ ಬಸವ ದರ್ಶನ ಹಾಗೂ ವಚನ ಸಾಹಿತ್ಯ ಕುರಿತು ಪ್ರಭಾವ ಶಾಲಿಯಾದ ಅನೇಕ ಉಪನ್ಯಾಸಗಳನ್ನು ನೀಡಿದಲ್ಲದೇ ಬಸವೇಶ್ವರರನ್ನು ಕುರಿತು ಹಿಂದಿಯಲ್ಲಿ ಕನ್ನಡಕ್ಕೆ ಒಂದು ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಅದನ್ನು ಮೊಟ್ಟ ಮೊದಲಿಗೆ ಅನುವಾದಿಸಿದ ಕೀರ್ತಿ ದೇಶಾಂಶರಿಗೆ ಸಲ್ಲುತ್ತದೆ.

ಕಲ್ಯಾಣ ಕ್ರಾಂತಿಯ ಹರಿಕಾರರಾದ ಮಹಾತ್ಮಾ ಬಸವೇಶ್ವರರು, ಮಹಾಜ್ಞಾನಿಗಳು. ಅವರು ಸಾಮಾಜಿಕ ಸಮಾನತೆ, ಮಾನವತೆ ಮತ್ತು ಅನುಭಾವ ಪೂರ್ಣ ಜನಬಳಕೆಯ ಕನ್ನಡ ನುಡಿಗಳಿಂದ ದಿವ್ಯ ವಿಚಾರವನ್ನು ನಮ್ಮ ಜನತೆಗೆ ನೀಡಿದರು. ಅದು ಸಮಸ್ತ ವೀರಶೈವಕ್ಕೆ ಒಂದು ಐತಿಹಾಸಿಕವೂ, ಅಮರವೂ ಆದ ದಾಖಲೆ ಆಗಿದೆ. ವಿಶ್ವ ಜ್ಯೋತಿಯಾಗಿರುವ ಈ ಮಹಾನ್ ಚಿಂತಕರೂ ಸಮಾಜ ಸುಧಾರಕರೂ, ಧರ್ಮದುರಂದರೂ ಆಗಿರುವ ಅವರ ಲೋಕ ಕಲ್ಯಾಣದ ವಿಚಾರಗಳು ಅವಿಸ್ಮರಣೀಯ ಸಂಗತಿಗಳು. ಸಮಾನತೆ ಕಾರ್ಯಗೌರವ, ಸದಾಚಾರಗಳ ಪ್ರಭಾವ ಹಾಗೂ ಉನ್ನತ ಭಾವಗಳ ಮೇಲೆ ಸ್ಥಾಪಿಸಲಾಗಿದ್ದ ಆಧ್ಯಾತ್ಮಿಕ ಮತ್ತು ಚಾರಿತ್ರಿಕ ಸಂಸ್ಕೃತಿಯ ಮಹತ್ವವನ್ನು ಅವರು ಪ್ರತಿಪಾದಿಸಿದ್ದಾರೆ. ಧರ್ಮಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರ, ಆಧ್ಯಾತ್ಮಶಾಸ್ತ್ರ, ಮಾನವಶಾಸ್ತ್ರ, ಮನೋವಿಜ್ಞಾನ, ಸಮಾಜಶಾಸ್ತ್ರಗಳೊಡನೆ ಬಸವಣ್ಣನವರು ಸಾಲಿದ ಮೌಲ್ಯಗಳ ಗಾಢ ಸಂಬಂಧವಿರುವುದನ್ನು ತಿವಾರಿಯವರು ತೋರಿಸಿದ್ದರು.

ಅವರು ಚಿತ್ರಿಸಿದ ವ್ಯಕ್ತಿ ಚೇತನದಿಂದ ವಿಶ್ವಚೇತನದ ವರೆಗಿನ ಈಶ್ವರನ ಮೂಲ ಸತ್ತೆಯನ್ನು ನಿರೂಪಿಸುತ್ತ ಪರಮ ಶಿವಭಕ್ತ ಮಹಾಬಸವೇಶ್ವರರನ್ನು ಆಧ್ಯಾತ್ಮ ಮಹಾಪುರುಷರನ್ನಾಗಿ ದೇಶಾಂಶ ಹುಡಗಿಯವರು ಅನುವಾದಿಸಿ ಪುನರ್ ಸೃಷ್ಟಿಗೊಳಿಸಿರುವುದು ಇಲ್ಲಿ ಗಮನಾರ್ಹ ಸಂಗತಿಯಾಗಿದೆ. ಇದು ಓದುಗರ ಮನ ಸೆಳೆಯುವ ಅನುವಾದ ಕೃತಿಯಾಗಿ ಮೂಡಿಬಂದಿದ್ದು, ಅದರ ಶ್ರೇಯಸ್ಸು ಮೂಲ ಲೇಖಕ ಹಾಗೂ ಅನುವಾದಕರಿಬ್ಬರಿಗೂ ಸಲ್ಲುತ್ತದೆ ಎನ್ನಬಹುದು.

[8] ದೇಶಾಂಶ ಹುಡಗಿ – ಮಹಾತ್ಮ ಬಸವೇಶ್ವರ – ೧೯೯೩ ಭಿತಿವಾದಿ ಕುರಿತು ಪು–

## ೨-೪ ಸಂಕೀರ್ಣ ಸಾಹಿತ್ಯ:

ದೇಶಾಂಶ ಹುಡಗಿಯವರ ಕಾವ್ಯೇತರ ಕೃತಿಗಳಲ್ಲಿ ಸಂಪಾದನೆ, ಅನುವಾದ, ವ್ಯಕ್ತಿ ಚಿತ್ರಣ, ಸಣ್ಣ ಕಥೆಗಳನ್ನು ಹೊರತುಪಡಿಸಿ, ಉಳಿದವುಗಳನ್ನು ಸಂಕೀರ್ಣ ಭಾಗದಲ್ಲಿ ಅವಲೋಕಿಸಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಅವರ ಸಮೀಕ್ಷೆಗಳು ಚಿಂತನ ಸಾಹಿತ್ಯ ಹಾಗೂ ವೈಚಾರಿಕ ಬರಹಗಳು ಸೇರಿಕೊಂಡಿವೆ. ಅವರ ಅಪ್ರಕಟಿತ ರುಬಾಯಿಗಳು, ಆಡುನುಡಿಯ ದ್ವಿಪದಿಗಳಾದ ಅವರ ಅಕ್ಷಕಟಿತವಾದ ಹುಂಬನ ಹಾಡುಗಳು, ವಾಂತಿ ಎಂಬ ಸಾಹಿತ್ಯಿಕ ಪ್ರಬಂಧಗಳು ಅವರ ಸ್ವಾತಂತ್ರ ಹೋರಾಟಗಾರರ ಬರಹಗಳನ್ನು ಇಲ್ಲಿ ಅಲಿಯಬಹುದಾಗಿದೆ.

ದೇಶಾಂಶರು ಉತ್ತಮ ಭಾಷಣಕಾರರು ಅವರು ಜಿಲ್ಲೆಯ ಹಾಗೂ ನಾಡಿನ ಇತರೆಡೆಗಳಲ್ಲಿ ಮಾಡಿರುವ ಹಲವು ವಿಷಯಗಳನ್ನು ಕುರಿತು ಭಾಷಣಗಳು, ಅದರಲ್ಲೂ ಅವರು ಬೀದರ ಜಿಲ್ಲೆಯ ೮ ನೆಯ ಕನ್ನಡ ಸಮ್ಮೇಳನದ ಅಧ್ಯಕ್ಷೀಯ ಭಾಷಣವು ತುಂಬಾ ವೈಚಾರಿಕವಾಗಿದ್ದು, ಕನ್ನಡಪರ ಕಾಳಜಿಯನ್ನು ವ್ಯಕ್ತಗೊಳಿಸುತ್ತದೆ. ವಿವಿಧ ವಿಷಯವಾಗಿದ್ದು, ಕನ್ನಡಪರ ಕಾಜಳಿಯನ್ನು ವ್ಯಕ್ತಗೊಳಿಸುತ್ತದೆ. ವಿವಿಧ ವಿಷಯಗಳಿಗೆ ಸಂಬಂಧಿಸಿದ ಅವರ ಭಾಷಣಗಳು ವಿಸ್ತೃತವಾಗಿದ್ದು, ಅವುಗಳು ತುಂಬಾ ಪ್ರಮುಖವಾಗಿವೆ. ಬೀದರ ನೆಲದ ಇತಿಹಾಸ, ಸಾಹಿತ್ಯಿಕ ಪರಂಪರೆ, ಕಲೆ, ಕೋಟೆ-ಕೊತ್ತಳಗಳ ವಿವರಣೆ ಹಾಗೂ ಜಿಲ್ಲೆಯ ಪ್ರಮುಖ ಸ್ಥಳಗಳ ಐತಿಹಾಸಿಕತೆ, ಜಾನಪದ ಸಾಹಿತ್ಯವನ್ನು ಹೃದಯ ಬಿಚ್ಚಿ ತೋರಿಸುವ ಭಾಷಗಣು ಈ ಭಾಗದ ಸಾಂಸ್ಕೃತಿಕ ವೈಶಿಷ್ಟ್ಯವನ್ನು ಸರಿಯಾಗಿ ಗ್ರಹಿಸಿ ಹೇಳುವುದನ್ನು ಕಾಣುತ್ತೇವೆ. ಅವರು ಆಕಾಶವಾಣಿ ದೂರದರ್ಶನಗಳಲ್ಲಿ ಮಂಡಿಸಿದ ಚಿಂತನೆಗಳು ವೈಶಿಷ್ಟ್ಯಪೂರ್ಣವಾಗಿದ್ದು, ಅವು ಜನಮನಗೆದ್ದಿವೆ.

ಪ್ರತಿಭಟನಾ ಧೋರಣೆ, ವಸ್ತುನಿಷ್ಠೆ ಚಿಂತನೆ, ಸಾಂಸ್ಕೃತಿಕ ಎಚ್ಚರ ಮತ್ತು ಚಾರಿತ್ರಿಕ ಪ್ರಜ್ಞೆಯುಳ್ಳ ಅವರ ಚಿಂತನ ಬರಹಗಳು, ಅರ್ಥಪೂರ್ಣ ಭಾಷಣಗಳು ತುಂಬಾ ಸೊಗಸಾಗಿ ವ್ಯಕ್ತವಾಗಿರುವುದನ್ನು ನಾವಿಲ್ಲಿ ಗುರುತಿಸಬಹುದಾಗಿದೆ.

## ೨.೫ ಸಣ್ಣ ಕಥೆಗಳು:

ಸಣ್ಣ ಕಥೆಗಳು ಯಾವುದೇ ಘಟ್ಟದ ಚರ್ಚೆ ಬರಲಿ, ಮಾಸ್ತಿಯವರು ನಮ್ಮ ಪಾಲಿಗೆ ಪಾತ ಸ್ಮರಣೀಯರಾಗಿ ವಂದ್ಯರಾಗುತ್ತಾರೆ. ಮಾಸ್ತಿ ಗೊರೂರ ರಾಮಸ್ವಾಮಿ ಅಯ್ಯಂಗಾರ, ಶಂಕರ ಮೊಕಾಸಿ, ಗಿರಡ್ಡಿ ಗೋವಿಂದರಾಜು, ಮೊದಲಾದವರ

ಧೋರಣೆಗಳನ್ನು ಕಂಡುಕೊಂಡು ಸಣ್ಣ ಕಥೆಗಳನ್ನು ರಚಿಸಿರುವ ದೇಶಾಂಶ ಹುಡಗಿಯವರು ಉತ್ತಮ ಕಥೆಗಾರರಲ್ಲಿ ಪ್ರಮುಖರಾಗಿರುತ್ತಾರೆ. ಅವರ ಮಾಸ್ತರನ ಮನೆ ಸಣ್ಣ ಕಥೆಗಳು ಸಂಕಲನ ಕೃತಿಯಾಗಿದೆ.

೨೦೦೭ ರಲ್ಲಿ ಪ್ರಕಟವಾಗಿರುವ ಮಾಸ್ತರನ ಮನೆಯಲ್ಲಿ ಒಟ್ಟು ೧೧ ಕಥೆಗಳಿವೆ. ಶಿಕ್ಷಕರಾಗಿ, ಶಿಕ್ಷಣಾಧಿಕಾರಿಯಾಗಿ ಸೇವೆ ಸಲ್ಲಿಸಿದ ದೇಶಾಂಶ ಹುಡಗಿಯವರು ತಮ್ಮ ಸೇವಾವಧಿಯಲ್ಲಿ ಸಾಮಾಜಿಕ ಜೀವನದಲ್ಲಿಯ ಜನರ ಸಮಸ್ಯೆಗಳಿಗೆ ಪರಿಹಾರ ದೊರಕಿಸಲು ಪ್ರಯತ್ನಿಸಿದ ಅವರ ಅನುಭವದ ಘಟನೆಗಳೇ ಇಲ್ಲಿಯ ಬಹುತೇಕ ಕಥೆಗಳ ಕಥಾ ವಸ್ತುವಾಗಿದ್ದು, ಕವಿಯು ಹೆಸರಿಸಿರುವ ಮಾಸ್ತರನ ಮನೆ ಎಂಬ ಹೆಸರು ಇದಕ್ಕೆ ಔಚಿತ್ಯಪೂರ್ಣವೆನಿಸಿದೆ[9]. ಈ ಸಂಕಲನದಲ್ಲಿರುವ ಮಲ್ಲೇಶಿ ಕಾಕಾ, ವೈದ್ಯನಾಥ, ಮಾಸ್ತರನ ಮನೆ, ಪೀಡೇಶ್ವರಿ, ಚೆನ್ನಾ, ಸಿದ್ಧಾಸಿದ್ಧಿ, ಸ್ಯಾಯಾ, ನಿಂಗಪ್ಪ ಮುತ್ಯಾ, ಪಾಶಜ್ಞಾ, ಕೊನೆಯ ಸಾವು, ನಿಜಾನಂದ ಎಂಬ ಕಥೆಗಳು ಅಕ್ಷರ ವಂಚಿತ, ಅತೀ ಹಿಂದುಳಿದ ಪ್ರದೇಶದಲ್ಲಿ ಮನೆ ಮಾಡಿರುವ ಮೂಢನಂಬಿಕೆ, ದಬ್ಬಾಳಿಕೆ, ಹೆಣ್ಣಿನ ಶೋಷಣೆ, ಧಾರ್ಮಿಕ ಹಾಗೂ ರಾಜಕೀಯ ಭ್ರಷ್ಟತೆಯ ವಿವಿಧ ಮುಖಗಳ ಕರಾಳ ಸ್ವರೂಪವನ್ನು ಚಿತ್ರಿಸುತ್ತವೆ. ತಮ್ಮ ಸುತ್ತಲಿನ ಸಮಾಜದಲ್ಲಿ ನಿತ್ಯವು ನಡೆಯುವ ಘಟನೆಗಳು ಕತೆಗಾರನ ಮನಸ್ಸನ್ನು ಗಾಢವಾಗಿ ಕಲಕಿವೆ. ಕಣ್ಣೇದುರಿಗೆ ನಡೆಯುವ ಅನ್ಯಾಯಗಳಿಗೆ ಪ್ರತಿಭಟಿಸಿ, ಆರೋಗ್ಯ ಪೂರ್ಣ ಸಮಾಜಕ್ಕಾಗಿ ಅವು ತುಡಿಯುವುದನ್ನು ನಾವಿಲ್ಲಿ ಕಾಣುತ್ತೇವೆ.

ಒಟ್ಟಿನಲ್ಲಿ ಈ ಕಥಾ ಸಂಕಲನವನ್ನು ಕುರಿತು ಹೇಳಬಹುದಾದ ಮಾತೆಂದರೆ, ಇಲ್ಲಿ ದೇಶಾಂಶ ಹುಡಗಿಯವರು ಹಳ್ಳಿಯ ದಟ್ಟ ಅನುಭವ ಪರಂಪರೆಯಲ್ಲಿ ಬೆಸೆದುಕೊಂಡಿರುವ ಸಾಂಸ್ಕೃತಿಕ ಪರಿಸರವನ್ನು ಉರ್ದು ಮಿಶ್ರಿತ ಕನ್ನಡ ಭಾಷೆಯಲ್ಲಿ ವಿಸ್ತಾರವಾಗಿ ಚಿತ್ರಿಸಿದ್ದಾರೆ. ಇಲ್ಲಿಯ ಅನೇಕ ಕಥೆಗಳಲ್ಲಿ ಬರುವ, ಚೆನ್ನಮ್ಮ, ಶಿವಣಿ, ಸಿದ್ದಿ, ವತ್ಸಲಾ, ಹಲಿಮಜ್ಜಿ, ಮುಂತಾದವರು ಸಮಾಜಕ್ಕೆ ಸವಾಲಾದ ಸಮಸ್ಯೆಗಳಿಗೆ ಅಂಜದೆ ಮುನ್ನಡೆದಿದ್ದಾರೆ. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯನ್ನು ಪ್ರತಿಭಟಿಸುವ ಸ್ತ್ರೀ ಪಾತ್ರಗಳು ಮಾನವತೆಗೆ ಮಿಡಿವಧೀರ ಮಹಿಳೆಯರಾಗಿ ಚಿತ್ರಿತವಾಗಿದ್ದಾರೆ. ಸ್ತ್ರೀ ಪ್ರಧಾನ ಕಾಳಜಿ ಇಲ್ಲಿಯ ಎಲ್ಲ ಪಾತ್ರಗಳಲ್ಲಿ

---

[9] ಸೂಗಯ್ಯ ಹಿರೇಮಠ – ಮಾಸ್ತರನ ಮನೆ – ಮುನ್ನುಡಿಯಲ್ಲಿ ಪು–೬.

ಕಾಣುತ್ತಿದ್ದು, ವಸ್ತು ಪಾತ್ರ ಚಿತ್ರಣಗಳ ದೃಷ್ಟಿಯಲ್ಲಿ ಈ ಕಥೆಗಳು ಯಶಸ್ಸು ಪಡೆದಿವೆ ಎನ್ನಬಹುದು. ಹುಡಗಿಯವರ ಕಥೆ ಹೆಣೆಯುವ ತಂತ್ರದಲ್ಲಿ ಸ್ವಲ್ಪ ಶಿಥಿಲತೆ ಕಂಡರೂ ಸಹ ಅವರವು ಘಟನಾ ಪ್ರಧಾನವಾದ ಕಥೆಗಳೆನಿಸಿರುವುದರಿಂದ ಇಲ್ಲಿಯ ಕಥಾ ವಸ್ತುವಿನ ಆಯ್ಕೆ ಸಾಮಾಜಿಕ ನೀತಿಗೆ ಬದ್ಧವಾಗಿರುವುದನ್ನು ಕಾಣಬಹುದು.

ಬೀದರ ಜಿಲ್ಲೆಯ ಹಿರಿಯ ಬರಹಗಾರಲ್ಲಿಯೇ ಆದಮ್ಯ ಚೈತನ್ಯವುಳ್ಳ ದೇಶಾಂಶ ಹುಡಗಿಯವರು ದಣಿವರಿಯದ ೭೬ ರ ಯುವಕ ಆಧುನಿಕ ವಚನಗಳು, ಜೀವನ ಚರಿತ್ರೆ ಪ್ರಬಂಧ, ಭಾವಗೀತೆಗಳ ರಚನೆಗಳೊಂದಿಗೆ ಕಥಾ ಜಗತ್ತಿಗೆ ತಮ್ಮದೇ ಆದ ವಿಶಿಷ್ಟ ಅನುಭವಗಳ ಕೊಡುಗೆ ನೀಡಿದ ಇವರದು ಪ್ರಾದೇಶಿಕ ಭಾಷಾ ವೈಶಿಷ್ಟ್ಯದ ಸೊಗಡಿನ ಕಥಾ ಸಂಕಲನವೆನಿಸಿದೆ ಎಂದು ಹೇಳಬಹುದು.

ಒಟ್ಟಿನಲ್ಲಿ ದೇಶಾಂಶ ಹುಡಗಿಯವರ ಕಾವ್ಯ ಹಾಗೂ ಕಾವ್ಯೇತರ ಕೃತಿಗಳನ್ನೆಲ್ಲ ಅವಲೋಕಿಸಿದ ನಂತರ ಗಮನಕ್ಕೆ ಬರುವ ಮುಖ್ಯವಾದ ವಿಷಯವೆಂದರೆ – ಅವರ ಬದುಕು ಹಾಗೂ ಬರಹಗಳಲ್ಲಿ ತಾದತ್ಮ್ಯ ಹೊಂದಿಕೆಯಿದೆ. ಅವರು ಏನನ್ನು ಕುರಿತು ಆಲೋಚಿಸುತ್ತಾರೋ ಹಾಗೆಯೇ ಅಭಿವ್ಯಕ್ತಿ ಮಾಡುತ್ತಾರೆ. ಇದು ಎಲ್ಲರಿಗೂ ಸಿದ್ದಿಸುವ ಕಲೆ ಅಲ್ಲ ಎಂಬುದನ್ನು ನಾವಿಲ್ಲಿ ಕಂಡುಕೊಳ್ಳಬಹುದಾಗಿದೆ.

# ದೇಶಾಂಶ ಹುಡಗಿಯವರ ಕಾವ್ಯದ ಭಾಷೆ, ಶೈಲಿ, ಛಂದಸ್ಸು

ವಿಮರ್ಶಕ ಬುದ್ಧಿಯ ದೇಶಾಂಶ ಹುಡಗಿಯವರು ಬೀದರ ಜಿಲ್ಲೆಯ ಅಪರೂಪದ ಲೇಖಕರು. ಅವರು ಕಂಡದ್ದನ್ನು ಕಂಡ ಹಾಗೆ ಹೇಳುವ ಗುಣದವರು. “ಕನ್ನಡಾಭಿಮಾನಿಯಾಗಿ ಬಂದಿರುವ ಇವರು ಬೀದರ ಜಿಲ್ಲೆಯಲ್ಲಿ ಕನ್ನಡದ ಕಂಪು ಸದಾ ಪಸರಿಸಲು ಪ್ರಯತ್ನಿಸಿದ ಹಲವರಲ್ಲಿ ಒಬ್ಬರು”[1]. ಸದಾ ಲವಲವಿಕೆಯಿಂದ ಕೂಡಿದ ಅವರೊಬ್ಬ ಪ್ರತಿಭಾವಂತ ಶಿಕ್ಷಕರು. ಅವರು ಸೃಜನ ಶೀಲತೆಯು ಅವರ ಕಾವ್ಯದ ಕಾವ್ಯೇತರ ಸಾಹಿತ್ಯದ ಮೂಲಕ ಅನೇಕ ವಿಧದಲ್ಲಿ ಪ್ರಕಟಗೊಂಡಿದೆ. ಅದರಲ್ಲೂ ಅವರ ಭಾಷಿಕ ಬಗೆಯು ಇಲ್ಲಿ ಗಮನಾರ್ಹವಾಗಿ ನಿಲ್ಲುತ್ತದೆ.

ಕಾವ್ಯವು ಭಾಷೆಯ ಮೂಲಕ ನಡೆಯುವ ಒಂದು ಕ್ರಿಯೆ. ಆ ಭಾಷೆಯು ಸಂವಹನಕ್ಕಾಗಿಯೇ ಇರುವುದಾದರೂ ಕವಿಯು ಅದನ್ನು ತನ್ನದೇ ವಿವರಣೆಗೆ ವಿಶಿಷ್ಟ ರೀತಿಯಲ್ಲಿ ಬಳಸಿಕೊಳ್ಳುತ್ತಾನೆ. ಒಂದು ಭಾಷೆಯಲ್ಲಿಯ ಅಕ್ಷರಗಳು, ಪದಗಳು, ಪದ ಪುಂಜಗಳು, ವಾಖ್ಯಗಳು ಯಾವ ಯಾವ ವಿಧದಲ್ಲಿ ಬಳಕೆಯಾದರೆ ಅದರ ಅರ್ಥವಂತಿಕೆ ಹಿಗ್ಗುತ್ತದೆಂಬ ಜ್ಞಾನ ಕವಿಯಾದವನಿಗಿರುತ್ತದೆ. ಹೀಗಾಗಿ ಆ ಭಾಷೆಯ ವಿನ್ಯಾಸವನ್ನು ಕವಿಯು ರೂಪಿಸಿ ಅದನ್ನು ಪರಿಣಾಮಕಾರಿಯಾಗಿ ನಿರೂಪಿಸಲು ಸಿದ್ಧನಾಗಿರುತ್ತಾನೆ. ಈ ಹಿನ್ನೆಲೆಯಲ್ಲಿ ಸ್ಥಳೀಯ ಭಾಷಾ ಬಳಕೆಯು ಬಹು ಪರಿಣಾಮಕಾರಿಯಾಗುತ್ತದೆಂಬುದನ್ನು ಗಮನಿಸಬಹುದು. ಅಂತೆಯೇ ದೇಶಾಂಶ ಹುಡಗಿಯವರು ತಮ್ಮ ಕಾವ್ಯ ನಿವೇದನೆಯಲ್ಲಿ ಬೀದರ ಭಾಷೆಯನ್ನು ಬಳಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

ಭಾಷೆಯ ಸಂಸ್ಕಾರವು ಕವಿಗೆ ಅವನು ಬಾಲ್ಯದಲ್ಲಿ ಬೆಳೆದ ಪರಿಸರದಿಂದಲೇ ಬಂದಿರುವುದರಿಂದ, ಆ ಪರಿಸರದ ಭಾಷೆಯು ಅವನಲ್ಲಿ ರಕ್ತಗತವಾಗಿರುತ್ತದೆ. ಹೀಗಾಗಿ ದೇಶಾಂಶರು ತನ್ನ ತಂದೆ ತಾಯಿಯವರೊಂದಿಗೆ ಬೆಳೆದ ಹಳ್ಳಿ ಜೀವನ, ಅವರಾಡುವ ಭಾಷೆ, ಅದೂ ಸುಶಿಕ್ಷಿತರಲ್ಲದವರ ಆಡುನುಡಿ ಅವರ ಕನ್ನಡ ಭಾಷೆಯಾಯಿತು. ಗ್ರಾಮ್ಯ ಹಾಗೂ ಜಾನಪದೀಯ ಅಂಶಗಳೇ ಅವರ ಕಾವ್ಯದಲ್ಲಿ ಅಧಿಕವಾಗಿ ಕಾಣಸಿಗುತ್ತವೆ.

---

[1] ಡಾ. ಸೋಮನಾಥ ಯಳವಾರ – ಸೃಜನಶೀಲ ವ್ಯಕ್ತಿ– ದೇಶಾಂಶ – ಚೇತನ ಶಿಲ್ಪಿ ಪು–೮೫.

ಕಣ್ಣಾಗ ಕಾಮ ಕೈದಾಗ ಕತ್ರಿ
ಬಾಯ್ದಾಗ ಬಸವಾ ಬಸವಾ
ಬೋಳಾ ಮಂದಿಗಿ ಕುತ್ತಿಗೆ ಕೊಯ್ದು
ತಿಂತಾ ಇರ್ತಾರ ಮೇವಾ

ಎನ್ನುವ ಅವರ ಸಾಲುಗಳು ಅವರ ಗ್ರಾಮೀಣ ಭಾಷಾ ಬಳಕೆಗೆ ಹಿಡಿದ ಕನ್ನಡಿಗಳಂತಿವೆ. ಬೀದರ ಪದಕೋಶ ಎಂಬ ಹೆಸರಿನ ಗ್ರಾಮೀಣ ಶಬ್ದ ಸಂಗ್ರಹದ ಕೃತಿಯನ್ನು ಪ್ರಕಟಿಸುವ ಯೋಜನೆ ಇವರದ್ದು.

ದೇಶಾಂಶರ ಕಾವ್ಯ ಚಿಂತನೆಗಳು ಅವರದೇ ಆದ ಭಾಷ ಭಾವ್ಯಕ್ತಿಯಲ್ಲಿ ಅರಳಿನಿಂತ ಸಂವೇದನೆಗಳಾಗಿದ್ದು, ಅವು ಮಾನವೀಯ ಮೌಲ್ಯವನ್ನು ಎತ್ತಿ ತೋರಿಸುವ ಚಿತ್ತಾರಗಳಾಗಿ ನಿಲ್ಲುತ್ತವೆ.

ಎಲ್ಲಾ ಹೆಣ್ಣುಗಳ ಎದೆಯಲ್ಲಿ
ಒಂದೊಂದು ಹಣ್ಣು ಇದೆ
ಎಲ್ಲ ಹುಣ್ಣುಗಳ ಆಳದಲ್ಲಿ
ಒಂದೊಂದು ಗಂಡು ಇದೆ.

ಎಂಬಲ್ಲಿಯ ಚಿತ್ರ ಕಣ್ಣಟ್ಟುತ್ತದೆ. ಜೀವನವನ್ನು ತುಂಬಾ ಪ್ರೀತಿಸುವ ಕವಿಯು ಸಾತ್ವಿಕ ವ್ಯಕ್ತಿ. ಶರಣ ಮಾರ್ಗವನ್ನು ಅನುಸರಿಸುತ್ತಿರುವ ಅವರ ನಡತೆಯು ಸಚ್ಚಾರಿತ್ತದ್ದು. ಅಂತಹ ಸಂದರ್ಭಗಳಲ್ಲಿ ಅವರು ಬದುಕಿನ ಸಿಹಿ-ಕಹಿ ಅನುಭವಿಸಿ, ತನ್ನ ಪರಿಸರವನ್ನು ತದೇಶಕ ಚಿತ್ತದಿಂದ ಹಿಡಿದು ಕಾವ್ಯದಲ್ಲಿ ಸೆರೆಗೈದವರು. ಅವರ ಆ ಪರಿಯನ್ನು ಸಿರಿವಂತಗಿತ್ತಿಯ ಚಿತ್ರ ಹೀಗೆ ಮೂಡಿಸುತ್ತದೆ.

ಹೊಸದುಟ್ಟು ಹೊಸದ್ತೊಟ್ಟು
ಗೋದಿರೊಟ್ಟಿ ಹೊಟ್ಟಿಗಿ ತುರಕಿ
ಹಗ್ಲೂ ರಾತ್ರಿ ಹಾಸ್ಗೀ ಹಿಡಿತಾಳ್
ಬ್ಯಾನಿ ಮುದ್ದೀ ಸಿರಿವಂತಗಿತ್ರಿ.

ಬದುಕಿನ ಒಳಿತು ಕೆಡುಕುಗಳಿಗೆ ಸ್ಪಂದಿಸುವ ಅವರ ಕಾವ್ಯ ಝುರಿಯು ಅವರದೇ ಆದ ಮಣ್ಣಿನ ವಾಸನೆಯಿಂದ ಕೂಡಿಕೊಂಡು ಪರಿಮಳ ಸೂಸುತ್ತದೆ. ಇಂಥ ಶಬ್ದ ಚಿತ್ರ ಬಳಸಿಕೊಂಡು ಜಾನಪದ ಸೊಗಡನ್ನು ತನ್ನದಾಗಿಸಿಕೊಂಡ ದೇಶಾಂಶರ ಸಾಹಿತ್ಯ ಕಲೆ ತುಂಬಾ ಕಾವ್ಯಮಯವಾದುದು. ಇದ್ದದ್ದನ್ನು ಇದ್ದಂತೆ

ಹೇಳುವ ಈ ಕವಿ ಬಹುಮಟ್ಟಿಗೆ ಸರ್ವಜ್ಞನನ್ನು ಹೇಲುತ್ತಾರೆನ್ನುವ ವಿಮರ್ಶಕರು, ಅವರ ವ್ಯಂಗ್ಯ ವಿಡಂಬನೆಗಳಲ್ಲಿ ಸಂಕಲನದ ಸ್ಥಾಯಿಭಾವಗಳು.... ಈ ಕವನಗಳ ಹಿಂದೆ ಸಾತ್ವಿಕ ಸಂತಾಪವಿದೆ[2] ಎಂದು ಗುರುತಿಸುತ್ತಾರೆ.

ತಮ್ಮ ಸುತ್ತಲ ಜೀವನವನ್ನು ನಿರೀಕ್ಷಿಸುವ ನಿರೀಕ್ಷಿಸಿದ್ದನ್ನು ನೇರವಾದ ಮಾತಿನಲ್ಲಿ ಹಿಡಿದಿರಿಸುವ ಜಾಣ್ಮೆಯಿರುವುದನ್ನು ವಿರೆಂದ್ರ ಸಿಂಪಿಯವರು ಕಾಣುತ್ತಾರೆ. ಮುಖವಾಡಗಳ ಹಿಂದಿರುವ ಕ್ರೂರತನವನ್ನು ಬಿಂಬಿಸುವಲ್ಲಿ ಆವೇಶ ಪಡದೇ, ವಿಡಂಬನೆಯ ಚಾಟಿ ಏಟಿನಿಂದ ಹೊಡೆಯುವುದರ ಮೂಲಕ ಎಚ್ಚರಿಸುವುದು ಇವರ ಕಾವ್ಯ ಶೈಲಿಯ ವಿಶೇಷತೆ.

'ನಾಯಿ ಪ್ರಧಾನಮಂತ್ರಿಯಾದರೆ
ಬೊಗಳದೆ ಬಿಡುವುದೇ?
ಹಂದಿ ನ್ಯಾಯದೀಶನಾದರೆ ತಿನ್ನದೆ ಬಿಡುವುದೇ?
ಕೋಡಂಗಿ ಯೋಗಿಯಾದರೆ ಅಣಕಿಸದೆ ಬಿಡುವುದೇ?
ದಿಗಂಬರ ಕರಿಸಬಸವೇಶ್ವರ'

ಇಲ್ಲೆಲ್ಲ ಭಾಷೆಯ ಸೊಗಸು ಮಿಂಚುತ್ತ, ಇಡಂಬನೆಗಳ ಗುಡುಗು ಮೊಳಗಿ ಸುತ್ತ, ಸತ್ಯದ ಬಿರುಗಾಳಿ ಎಬ್ಬಿಸುವ ಭಾಷಾ ಶೈಲಿ ವ್ಯಕ್ತವಾಗಿದೆ. ದೇಶಾಂಶರ ಕಾವ್ಯದಲ್ಲಿ ನಂದಿ, ನಾಯಿ ಕೋಡಂಗಿ, ಹಂದಿ, ಲಾಂಚನ, ಮೊರ, ಊಡುಬತ್ತಿ, ಕರ್ಪೂರ, ನಾಗರಹಾವು, ಮಿಡಿನಾಗರ, ಹುತ್ತು ಮೊದಲಾದವುಗಳು ಹೆಚ್ಚು ಬಳಕೆಯಾದ ಪ್ರತಿಮೆಗಳಾಗಿದ್ದು, ಅವು ಅಲ್ಲಲ್ಲಿ ಮತ್ತೆ ಮತ್ತೆ ಕಾಣಿಸಿಕೊಂಡಿವೆ.

**ಛಂದಸ್ಸು:**

ಕವಿಯ ಕಾವ್ಯದ ಭಾಷಾ ವಿನ್ಯಾಸವನ್ನೇ 'ಛಂದಸ್ಸು' ಎಂದು ಕರೆಯಬಹುದಾಗಿದೆ. ಇದು ಕಾವ್ಯ ಶಿಲ್ಪಿವಾಗಿರುವುದರಿಂದ ಕವಿಯ ಕಾವ್ಯದ ಸ್ವರೂಪದ ನಿರ್ಧರಿಸಲು ಇದನ್ನು ಅರಿಯಬಹುದಾಗಿದೆ. ಜೀವನದ ಭಿನ್ನ ಅನುಭವಗಳನ್ನು ಸೇರಿಸಿ, ಸೇರಿಸಿ, ಒಂದು ಅರ್ಥ ಕಟ್ಟುವ ಕೆಲಸ ಮಾಡುವ ಕವಿಗೆ ಅದನ್ನು ರೂಪಿಸುವ ಛಂದಸ್ಸು ಕೂಡ ಗೊತ್ತಿರಬೇಕಾಗುತ್ತದೆ. ರೂಡಿಸುವ

---

[2] ಮಹಿಪಾಲರೆಡ್ಡಿ ಮುನ್ನೂರ್–ಚೇತನ ಶಿಲ್ಪಿ – ಪು–೧೧೨.

ಕಲೆಯನ್ನೇ ಕಾವ್ಯ ಬಂಧ, ಶಿಲ್ಪವೆಂದು ಹೇಳಲಾಗುತ್ತಿದ್ದು, ಅದನ್ನು ಹಿಂದಿನವರು ಛಂದಸ್ಸು ಎಂದು ಗುರುತಿಸಿದರು.

ದೇಶಾಂಶರು ಹೊಸಗನ್ನಡ ಕಾವ್ಯವಾಗಿರುವುದರಿಂದ ಇದು ಪಾಶ್ಚಾತ್ಯ ಮಾದರಿಯಲ್ಲ ಕಾವ್ಯ ಪ್ರೇರಣೆ, ಧೋರಣೆಗಳಿಂದ ಪ್ರಭಾವಿತವಾಗಿದ್ದು, ಅಲ್ಲಿಯದು ಮುಕ್ತ ಛಂದಸ್ಸು ಎಂದೇ ಹೇಳಬಹುದಾಗಿದೆ. ಇದರರ್ಥ ಛಂದಸ್ಸಿದ್ದು, ಅದನ್ನು ಮೀರಿರುವಂಥದ್ದು ಎಂದೇ ಹೇಳಬಹುದಾಗಿದೆ. ದೇಶಾಂಶರ ಭಾವ ತೀವ್ರತೆಗೆ ಅನುಸಾರವಾಗಿ ಅವರ ಕಾವ್ಯವು ಅಭಿವ್ಯಕ್ತಗೊಂಡಿದ್ದು, ಅಲ್ಲಿಯ ಸಾಲುಗಳಿಗೆ, ಅಕ್ಷರಗಳಿಗೆ, ಪದಗಳಿಗೆ ಮಿತಿಯೆಂಬುದಿಲ್ಲ. ಅವರ ಕಾವ್ಯಗಳಲ್ಲಿ ಪ್ರಾಸ ಬದ್ಧತೆಯು ಹೆಚ್ಚಾಗಿದ್ದು, ಲಯವನ್ನು ಇಲ್ಲಿಯ ಕವಿತೆಗಳು ಸದಾ ಕಾಪಾಡಿಕೊಂಡು ಬಂದಿರುವುದು ಸುಸ್ಪಷ್ಟ 'ಅಲಂಕಾರ'ಗಳಲ್ಲಿ ಹೋಲಿಕೆಗಳು, ದೃಷ್ಟಾಂತಗಳು ಹೆಚ್ಚಾಗಿ ಬಳಕೆಯಾಗಿವೆ.

'ಹಂದಿಗೆ ಹಳಸಿದ್ದಾದರೇನು, ಕೊಳೆತದ್ದಾದರೇನು
ಬಟ್ಟಲಲ್ಲಾದರೇನು ಬಚ್ಚಲಲ್ಲಾದರೇನು?
ಲಂಚಗುಳಿಗಳಿಗೆ ಹೊಗಳಿದರೇನು? ಹೀಗಳೆದರೇನು?
ಒದ್ದರೇನು, ಗುದ್ದಿದರೇನು?
ತಿನ್ನುವುದೊಂದೇ ಅವರ ಧರ್ಮವೆಂದ'

ಎನ್ನುವಲ್ಲಿ ಇವುಗಳನ್ನು ಕಾಣಬಹುದು. ತಾನು ಹೇಳುವ ವಿಷಯವು ಜನಮನ ಮುಟ್ಟಲೆಂದು ಹಂಬಲಿಸುವ ಕವಿಯು, ಲೋಕಾನುಭವವನ್ನು ಅವರದೇ ಆದ ಮಾತುಗಳಲ್ಲಿ ಹೇಳಿ ತಿಳಿಸುತ್ತಿರುತ್ತ ರೀತಿ ಇಲ್ಲಿ ಪರಿಣಾಮಕಾರಿಯಾಗಿದೆ ಎನ್ನಬಹುದು. ದೇಶಾಂಶರ ಅಕ್ಷರಜ್ಯೋತಿ ಯಲ್ಲಿಯ 'ಕಲೀರ್ರೆವ್ವ', 'ಅವರಂತಾಗಲೇ', 'ಸತಿ, ಒಕ್ಕಲಗಿತ್ತಿ–ಸಿರಿವಂತಗಿತ್ತಿ' ಪಡೆದ ತಾಯಿ, ತಿಳಿತಾದ ಬಡವನ ಪೆಟ್ಟು ಹಾಗೂ ದಿಗಂಬರ ವಚನಗಳು, ಕೇವಲ ಹವ್ಯಾಸದ ರಚನೆಗಳಾಗಿರದೆ, ಅವರ ನಿಜವಾದ ಸಂವೇದನೆಗಳನ್ನು, ಕಾವ್ಯವಾಗಿ ನಿರೂಪಿಸಿದ ಕವನಗಳೆಂದು ಗುರುತಿಸಬಹುದು. ಸರ್ವಜ್ಞನಂತೆ ಪ್ರತೀಕ ನಿಷವಾಗಿರುವ ವಚನಗಳು, ಕವಿತೆಯ ವಸ್ತು, ವಿನ್ಯಾಸ, ಶೈಲಿಗಳು ಓದುಗರ ಮೆಚ್ಚುಗೆಗೆ ಪಾತ್ರವಾಗಿವೆ ಎಂದು ಹೇಳಬಹುದು.

## ಸಮಕಾಲೀನ ಕವಿಗಳಲ್ಲಿ 'ದೇಶಾಂಶ ಹುಡಗಿ' ಯವರ ಸ್ಥಾನ ಮಾನ

ಈ ವರೆಗಿನ ಅಧ್ಯಾನಗಳೆಲ್ಲೆಲ್ಲ 'ದೇಶಾಂಶ ಹುಡಗಿ' ಯವರ ಬದುಕು ಬರಹಗಳನ್ನು ಕುರಿತು ವ್ಯಕ್ತಿನಿಷ್ಠವಾದ ಅಧ್ಯಯನ ಕೈಗೊಳ್ಳಲಾಗಿದೆ. ಒಬ್ಬ ಕವಿಯ ಸಾಮರ್ಥ್ಯವನ್ನು ಅಥವಾ ಆತನ ಸಾಹಿತ್ಯದ ಸತ್ವವನ್ನು ಸರಿಯಾಗಿ ತಿಳಿದುಕೊಳ್ಳುವಲ್ಲಿ ಆತನನ್ನು ಅವರ ಸಮಕಾಲೀನ ಸಾಹಿತಿಗಳೊಂದಿಗೆ ಹೋಲಿಸಿ ನೋಡುವುದು ಅವಶ್ಯಕವೆನಿಸುತ್ತದೆ. ಹೀಗಾಗಿ ಬೀದರ ಜಿಲ್ಲೆಯ ಹಿರಿಯ ಕವಿಯೆಂದು ಹೆಸರುಗಳಿಸಿರುವ ದೇಶಾಂಶ ಹುಡಗಿಯವರನ್ನು ಅವರ ಸಮಕಾಲೀನ ತೌಲನಿಕವಾಗಿ ಇಲ್ಲಿ ವಿವೇಚಇಸಲಾಗಿದೆ.

ಕನ್ನಡ, ಹಿಂದಿ, ಉರ್ದು, ಮರಾಠಿ ಭಾಷೆಗಳಲ್ಲಿ ಪಾಂಡಿತ್ಯ ಪಡೆದಿರುವ 'ದೇಶಾಂಶ'ರು ಸೃಜನಶೀಲ ಮನಸ್ಸಿನವರು, ಕ್ರಾಂತೀಯ ಮನೋಧರ್ಮವುಳ್ಳ ಬೀದ ನಾಡಿನ ವಿಚಾರಶೀಲ ಕವಿ. ಶರಣಸಾಹಿತ್ಯದ ತತ್ವ ಸಿದ್ಧಾಂತವನ್ನು, ಅದರ ನೈಜ್ಯ ಆಚಾರ–ವಿಚಾರಗಳನ್ನು ಅರ್ಥೈಸಿಕೊಂಡು ಬಾಳುತ್ತಿರುವ ಪ್ರಗತಿ ಪರತೆಯು ಅವರ ಕಾವ್ಯಗಳಲ್ಲಿ ಎದ್ದು ಕಣುವ ಸಂಗತಿಯಾಗಿದೆ. ಆಧುನಿಕ ಕನ್ನಡ ಭಾಷಾ ಸಾಹಿತ್ಯದ ನವ್ಯತೆ, ಪ್ರಗತಿಶೀಲತೆ, ಬಂಡಾಯ ಮನೋವೃತ್ತಿಯನ್ನು ಸರಿಯಾಗಿ ತಿಳಿದುಕೊಂಡಿರವ ಇವರು ಅವುಗಳನ್ನು ತಮ್ಮ ಕಾವ್ಯದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

ತುಂಬು ತೃಪ್ತಿಯ ಬದುಕನ್ನು ಬಾಳಿರುವ ಹುಡಗಿಯವರ ದಾಂಪತ್ಯ ಸುಖ ಹಾಲು ಸಕ್ಕರಯಂತೆ ಇತ್ತು. ಮಳ ಬದುಕಿನ ಕೊರತೆಯ ಹೊರತಾಗಿ ಸಂತೋಷದಿಂದ ಇದ್ದವರು. ತಮ್ಮ ಕೊನೆಯ ಉಸಿರಿರುವವರೆಗೆ ಕನ್ನಡದ ಸೇವೆ ಮಾಡಬೇಕೆಂದು ಬಯಸಿರುವವರು. ಈ ಕವಿಯ ಮನೋಧೋರಣೆಯಿರುವ ಈ ಕವಿಗೆ ಚನ್ನ ಸುತ್ತಲಿನ ಬದುಕೇ ಪ್ರೇರಣೆಯನ್ನೊದಗಿದೆ. ಅವರ ವೃತ್ತಿ ಜೀವನ ಕನಸುಗಳು, ನನಸಾಗಬೇಕೆಂದು ಹಗಲಿರುಳು ಪ್ರಯತ್ನಿಸಿದ ಅವರದು ಪ್ರೀತಿ ಕಾಣುವ ಬದುಕು. ಅಂತಹ ಜೀವನ ಪ್ರೀತಿ ಅವರ ಕಾವ್ಯದ ಪ್ರಧಾನ ಆಶಯವಾಗಿದೆ.

ಈ ತರದ ಆಸೆಯನ್ನಿಟ್ಟುಕೊಂಡು ಬೀದರ ಜಿಲ್ಲೆಯಲ್ಲಿ ಧನಾ ಕಾವ್ಯ ಕಟ್ಟಿದವರೆಂದರೆ, ಜಿ.ವಿ. ವಿಸಾಜಿ, ಎಂ.ಜಿ. ಗಂಗನಪಳ್ಳಿ, ಕಾಶಿನಾಥ ಅಂಬಲಗೆ, ಪ್ರೇಮಾ ಸಿರ್ಸೆ ಹಾಗೂ ವಿಜಯಶ್ರೀ ಸಬರದ ಅವರು. ಆದರೂ ಜಿಲ್ಲೆಯ ಇತರ

ಕವಿಗಳಿಗಿಂತ ನವೋದಯದಲ್ಲಿ ಪ್ರಮುಖವಾಗಿದ್ದ ಕುವೆಂಪು, ಬೇಂದ್ರೆ, ಶಿವರಾಮ ಕಾರಂತ ಹಾಗೂ ಮಾಸ್ತಿಯವರ ದಟ್ಟ ಪ್ರಭಾವ ಇವರ ಮೇಲಾಗಿರುವುದು ಸುಸ್ಪಷ್ಟ. ಅವರ 'ಅಕ್ಷರ ಪ್ರೀತಿ'ಯ ಕಾರ್ಯಕ್ರಮಗಳಲ್ಲಿಯ ಹಾಡುಗಳಿಗೆ ಪ್ರೇರಣೆ ಡಾ. ಶಿವರಾಮ ಕಾರಂತರು ಹಾಗೂ ಕೆ.ವ್ಹಿ. ಸುಬ್ಬಣ್ಣನವರು. ೧೯೯೩ ರಲ್ಲಿ ಜರುಗಿದ ಹೆಗ್ಗೋಡಿನಲ್ಲಿಯ 'ನವಸಾಕ್ಷರ ಕಾರ್ಯಗಾರ'ವು ಅವರ ಕವಿ ಮನಸ್ಸನ್ನು ಪ್ರಚೋದನಗೊಳಿಸಿರುವುದನ್ನು ಅವರು ಹೇಳಿಕೊಳ್ಳುತ್ತಾರೆ. ಅನಕ್ಷರತೆ, ಅತಿಸಂತಾನ, ಹೆಣ್ಣಿನ ಬಗೆಗಿನ ತಾತ್ಕಾರ ಮನೋಭಾವ, ಅಜ್ಞಾನ, ಬಾಲ್ಯ ವಿವಾಹ ಮೊದಲಾದ ಅನಿಷ್ಠೆಗಳನ್ನು ಹೊಡೆದೋಡಿಸಲು ಸಾಕ್ಷರತೆಯ ಅರಿವು ಮತ್ತು ಕ್ರಿಯಾಶೀಲತೆಗಳು ಮಾತ್ರ ಸಾಧನವಾಗಬಲ್ಲವೆಂದು ಅವರು ಹೇಳಿದ್ದು ಬರೆದದ್ದು ಬರೆದದ್ದು ಅರ್ಥಪೂರ್ಣ. ಈ ಅಕ್ಷರ ಜ್ಯೋತಿಯ ಎಲ್ಲ ಹಾಡುಗಳು ಬೀದರ ಜಿಲ್ಲೆಯ ಸಂಪೂರ್ಣ ಸಾಕ್ಷರತೆಯೊಂದಿಗೆ ಇಡೀ ರಾಜ್ಯದ ಅಕ್ಷರ ಪ್ರಚಾರ ಕಾರ್ಯದಲ್ಲಿ ತುಂಬಾ ನೆರವಾಗಿದೆ. ಎಂದರೆ ತಪ್ಪಾಗಲಾರದ ಅಂಶವೆನ್ನಬಹುದು.

ಮಾನವೀಯ ನೆಲೆಯುಳ್ಳ ದೇಶಾಂಶರ ಕವಿತೆ ಹಾಗೂ ವಚನಗಳು ಸಮಾಜದಲ್ಲಿಯ ಜೀವವಿರೋಧಿ ಶಕ್ತಿಗಳ ವಿರುದ್ಧ ಪ್ರತಿಭಟನೆ ಮಾಡುತ್ತಿದ್ದು, ವಿಶಿಷ್ಟವಾಗಿವೆ. ಬದುಕಿನ ಸುತ್ತಲೂ ಗಮನ ಹರಿಸುತ್ತಿರುವ ದೇಶಾಂಶರ ಕವಿತೆ ಹೃದಯವು ತನ್ನದೇ ಆದ ಕಾವ್ಯತ್ವದ ರೀತಿಯನ್ನು ಅಳವಡಿಸಿಕೊಳ್ಳಲು ಇಲ್ಲಿ ಪ್ರಯತ್ನಿಸುತ್ತಿದ್ದು, ನಮ್ಮ ಸಂಸ್ಕೃತಿಯೊಂದನ್ನು ತೋರಿಸಲು ಯತ್ನಿಸತ್ತಿರುವುದು ಗಮನಾರ್ಹ ಸಂಗತಿ ಎನ್ನಬಹುದು. ಇಂದಿನ ಬದುಕಿನ ಅವ್ಯವಸ್ಥೆಯನ್ನು ತೆರೆದ ಕಣ್ಣಿನಿಂದ ನೋಡುವ ಈ ಕವಿಯು, ಅದರಲ್ಲಿ ಕಾಣಿಸುವ ನೇವಿ ತೀವ್ರತಯನ್ನು ಅರಿತುಕೊಂಡು, ಅದನ್ನು ಪ್ರಶ್ನಿಸುತ್ತ ಬರೆಯುವ ಕಲಾವಂತಿಕೆಯನ್ನು ರೂಢಿಸಿಕೊಂಡರು. ಇಲ್ಲಿ ಬರೆಯುವ ಅವರ ಕಲಾ ಪ್ರಜ್ಞೆಗೆ ಬೀದರ ಭಾಷೆ ತುಂಬಾ ಹದಗೊಂಡು ಬಳಕೆಯಾಗಿದ್ದು, ಅವರ ಕವಿ ಹೃದಯದ ಅರಳುವಿಕೆ, ರೋಷಗೊಳ್ಳುವಿಕೆ, ತಿಳಿಹೇಳುವಿಕೆಯನ್ನಿಲ್ಲಿ ಕಾಣಬಹುದು.

ದೇಶಾಂಶ ಹುಡಗಿಯವರು ತಮ್ಮ ಮೊದಲ ಕವನ ಸಂಕಲನ ಬದುಕಿನ ಸುತ್ತ ಪ್ರಕಟಿಸುವು ಮೊದಲು ಬೀದರ ಜಿಲ್ಲೆಯಲ್ಲಿ ಮಾಣಿಕರಾವ ಧಾನಶ್ರೀಯ ಹಾಡುತ್ತ ಕಲಿ (೧೯೭೫) ಸಂಕಲನಗಳನ್ನು ಕಾಣಿಸಿಕೊಂಡಿದ್ದವು. ಆಗ ತಾನೇ ಹೊಸಕಾವ್ಯಕ್ಕೆ ಎದುರುಗೊಳ್ಳುತ್ತಿರುವ ಸಂಭ್ರಮ, ಅಭಿಮಾನ, ಉತ್ಸಾಹಗಳು ಈ ಸಂಕಲನಗಳ ಭಾವಕೋಶವನ್ನು ರೂಪಿಸಿವೆ[1]. ಚಾರಿತ್ರಿಕವಾಗಿ ಬೀದರ ಜಿಲ್ಲೆಯ ೪ ನೆಯ ಕವನ ಸಂಕಲನವನ್ನು ದೇಶಾಂಶರು ನೀಡಿದ್ದಾರೆಂದು ಹೇಳಬಹುದು.

---

[1] ವಿಕ್ರಮ ವಿಸಾಜಿ – ಕಾವ್ಯದ ವೈಶಿಷ್ಟ್ಯಗಳು – ಬೀ.ಜಿ.ದ. – ಪು ೧೦೪.

ಈ ಮೇಲಿನವರೊಂದಿಗೆ ದೇಶಾಂಶರನ್ನು ಹೋಲಿಸಿ ನೋಡಿದರೆ, ಜಿ.ಬಿ. ವಿಸಾಜಿ, ಬಸವರಾಜ ಸೈನೀರ್‌ರಿಗಿಂತ ಕೆಲವು ಕಾವ್ಯಗಳ ಗುಣಗಳಲ್ಲಿ ಭಿನ್ನವಾಗಿ ನಿಲ್ಲುವ ದೇಶಾಂಶರದು ಪ್ರತಭಟನಾ ಧೋರಣೆಯ ಕಾವ್ಯವೆನ್ನಬಹುದು. ಒಟ್ಟು ಇಲ್ಲಿಯ ಕಾವ್ಯಗಳ ಮುಖ್ಯ ಸ್ಥಿತಿಗಳೆಂದರೆ ಆರಾಧನೆ ಮತ್ತು ಪ್ರತಿಭಟನೆ. ನವೋದಯ ಕಾವ್ಯದ ಪ್ರಭಾವಕ್ಕೆ ಒಳಗಾದವರೂ ಆರಾಧನೆಯನ್ನು, ದಲಿತ-ಬಂಡಾಯದ ಪ್ರಬಾವಕ್ಕೆ ಒಳಗಾದವರು ಪ್ರತಿಭಟನೆಯನ್ನು ತಮ್ಮ ಕಾವ್ಯಗಳಲ್ಲಿ ಅಭಿವ್ಯಕ್ತಿಯ ದಾರಿಯನ್ನಾಗಿಸಿಕೊಂಡಿದ್ದಾರೆ. ಇಲ್ಲಿ ದೇಶಾಂಶರ ಕಾವ್ಯದ ಹಾದಿಯಲ್ಲಿ ಇವೆರಡು ಪ್ರಭಾವದ ಹೆಜ್ಜೆಗಳನ್ನು ಗುರುತಿಸಬಹುದಾಗಿದೆ. ದೇಶಾಂಶ ಹುಡಗಿಯವರ ಅಕ್ಷರ ಜ್ಯೋತಿಯು ಆರಾಧನೆಯ ಗುಣವನ್ನು, ಅವರ ಬದುಕಿನ ಸುತ್ತ ಹಾಗೂ ದಿಗಂಬರ ವಚನಗಳ, ಕೃತಿಗಳು ಪ್ರತಿಭಟನೆಯ ಮನೋವೃತ್ತಿಯನ್ನು ಒಳಗೊಂಡಿವೆ ಎನ್ನುವುದು ಎದ್ದು ಕಾಣುತ್ತದೆ. ಅದಕ್ಕಾಗಿಯೇ ಡಾ. ಜಿ.ಬಿ. ವಿಸಾಜಿಯವರು ಬದುಕಿನ ಸುತ್ತ ಕವನ ಸಂಕಲನ ಕುರಿತು ಇದು ನವೋದಯ ಕಾವ್ಯ, ಇದು ನವ್ಯಕಾವ್ಯ, ಇದು ಬಂಡಾಯ ದಲಿತ ಕಾವ್ಯ ಎಂದು ಯಾವುದೇ ಪಂಥಕ್ಕೆ ಅಂಟಿಕೊಳ್ಳದೇ ಬರೆದಿದ್ದರು ಅವುಗಳ ಛಾಯೆ ಅಲ್ಲಲ್ಲಿ ಮೂಡಿದೆ ಎಂದಿರುವುದು” ಸರಿಯಾದ ಅಭಿಪ್ರಾಯವೆನಿಸುತ್ತದೆ.

ಡಾ. ಜಿ.ಬಿ. ವಿಸಾಜಿಯವರಂತೆ, ಎಂ.ಜಿ. ಗಂಗನಪಳ್ಳಿಯಂತೆ ಭಾವುಕರಾಗಿ ಕವಿತೆ ಬರೆಯುತ್ತಿರುವ ದೇಶಾಂಶರ ಕಾವ್ಯಗಳಲ್ಲಿ ಶಬ್ದದ ದುಂದುಗಾರಿಕೆ ಅಧಿಕಾರವಾಗಿರುವುದು ಗಮನಕ್ಕೆ ಬರುತ್ತದೆ. ಇವರಲ್ಲಿ ನವ್ಯದ ಸೆಳೆತ ಕಡಿಮೆ. ಆದರೂ ಆರಾಧನೆ ಮತ್ತು ಪ್ರತಿಭಟನೆಗಳ ತಮ್ಮ ಅಭಿವ್ಯಕ್ತಿ ಕ್ರಿಯೆಯಲ್ಲಿ ತಮ್ಮ ಗ್ರಾಮೀಣ ಜಗತ್ತಿನ ಅನುಭವಗಳನ್ನು ಕಟ್ಟಿಕೊಟ್ಟಿರುವುದು, ಅದಕ್ಕಾಗಿ ದೇಶಿ ಶೈಲಿಯನ್ನು ಊಟ್ಟಿಕೊಂಡು ಸಾಗಿರುವುದು ಗಮನಾರ್ಹವಾಗುತ್ತದೆ. ಇಂಥ ಸಂದರ್ಭಗಳಲ್ಲಿ ಅವರ ದಲಿತ ಬಂಡಾಯ ಗ್ರಹಿಕೆಗಳಿಗಿಂತ, ದೇಶಿಯತೆ ಪ್ರಾಮುಖ್ಯವಾಗಿ ಆ ಕವನಗಳು ಹೆಚ್ಚು ಅರ್ಥಪೂರ್ಣವೆನಸುತ್ತವೆ. ಈ ನಿಟ್ಟಿನಲ್ಲಿ ಇಲ್ಲಿಯ ಜಿ.ಬಿ. ವಿಸಾಜಿ, ಕಾಶಿನಾಥ ಅಂಬಲಗೆ, ಎಂ.ಜಿ. ಗಂಗನಪಳ್ಳಿ ಮೊದಲಾದ ಕವಿಗಳೊಂದಿಗೆ ದೇಶಾಂಶ ಹುಡಗಿ ಯವರಿಗೂ ಇಂಥ ಕಲಾಪ್ರಜ್ಞೆಯೊಂದಿರುವುದು ಎದ್ದು ಕಾಣುತ್ತದೆ. ಆದರೂ ಬೀದರ ಜಿಲ್ಲೆಯ ಹೊಸ ಕಾವ್ಯದ ವಿಶೇಷತೆಯನ್ನು ಗಮನಿಸುವಾಗ, ಇಲ್ಲಿಯ ಬದುಕಿನ ಅನುಭವಗಳನ್ನು ಹೆಚ್ಚು ತೀವ್ರವಾಗಿ, ಸಾಂದ್ರವಾಗಿ ರೂಪಿಸಿ ಮುಂದುವರೆದವರಲ್ಲಿ, ಜಿ.ಬಿ. ವಿಸಾಜಿ ಹಾಗೂ ಅಂಬಲಗೆಯವರಿಗಿಂತ ದೇಶಾಂಶರೇ ಹೆಚ್ಚು ಮಹತ್ವದ ಕವಿ ಎನಿಸುತ್ತಾರೆ.

---

[2] ಚೇತನ ಶಿಲ್ಪಿ – ೨೦೦೫ – ಪು ೧೫೬

ಕಾವ್ಯದ ರಚನೆ, ವಸ್ತುವಿನ ಆಯ್ಕೆ, ಅಭಿವ್ಯಕ್ತಿಯ ತಂತ್ರ ಮೊದಲಾದ ಕೆಲವು ಮುಖ್ಯ ಗುಣಗಳಿಂದಾಗಿ, ಬಸವರಾಜ ಸೈನೀರ್, ಜಿ.ಬಿ. ವಿಸಾಜಿ, ದೇಶಾಂಶ ಹುಡಗಿ, ಕಾಶಿನಾಥ ಅಂಬಲಗೆ, ಪ್ರೇಮಾ ಸಿರ್ಸೆ, ಬಂಡೆಪ್ಪಾ ಖೂಬಾ, ವಿಜಯಶ್ರೀ ಸಬರದವರನ್ನು ಬೀದರ ಜಿಲ್ಲೆಯ ಪ್ರಾತಿನಿಧಿಕ ಕವಿಗಳೆಂದು ಗುರುತಿಸಬಹುದು. ಅನುಭವಗಳನ್ನು ಕೆಲ ಮಟ್ಟಿಗಾದರೂ ಹೊಸ ಕ್ರಮದಲ್ಲಿ ಹೇಳಲು ಯತ್ನಿಸಿದವರಲ್ಲಿ ಹಾಗೂ ಕಾವ್ಯ ಗುಣದ ವಿಶೇಷ ಸೂಕ್ಷ್ಮತೆಗಳನ್ನು ತಮ್ಮ ಕಾವ್ಯದಲ್ಲಿ ಕಾಪಾಡಿಕೊಂಡು ಬಂದ ಇಲ್ಲಿಯ ಕವಿಗಳಲ್ಲಿ ದೇಶಾಂಶ ಹುಡಗಿಯವರು ತುಂಬಾ ಪ್ರಮುಖರಾಗುತ್ತಾರೆ ಎನ್ನಬಹುದು.

ಜಿ.ಬಿ. ವಿಸಾಜಿಯವರಲ್ಲಿ ಅಲ್ಲಿಲ್ಲಿ ಕಾಣುವ ಮಾನವೀಯ ಹುಡುಕಾಟದ ನೆಲೆಗಳು, ನಾಡು-ನುಡಿ ಪ್ರೇಮ, ರಾಷ್ಟ್ರಭಕ್ತಿ ದೇಶಾಂಶರಲ್ಲಿ ಹೆಚ್ಚಾಗಿದ್ದು, ಅವರ ಕಾವ್ಯದ ಒಳ ತುಡಿತವೇ ಅವುಗಳೆನ್ನಬಹುದು. ಬೀದರಿನ ಭಾಷೆಯನ್ನು ತನ್ನ ಸಮಕಾಲೀನರಾಗಿರುವ ಬಿ.ಎನ್. ಸೋಲಾಪುರೆ, ಶರಣಯ್ಯ ಮಠಪತಿ, ಕೆ.ಜಿ. ಮಾಸೆಟ್ಟಿ, ಕೆರಳ್ಳಿ ಲಕ್ಷ್ಮಾರೆಡ್ಡಿಯವರಿಗಿಂತ ಹದವಾಗಿ ಬಳಸುವ ದೇಶಾಂಶ ಹುಡಗಿಯವರು ಒಬ್ಬ ಮಹ್ವದ ಪ್ರಯೋಗಶೀಲ ಕವಿಯೆನಿಸುತ್ತಿದ್ದು, ಅವರ ಅಭಿವ್ಯಕ್ತಿ ರೀತಿ ಉಳಿದವರಿಗಿಂತ ಹೊಸ ತರಹದ್ದೆನ್ನಬಹುದು. ದೇಶಿ ನುಡಿಗಟ್ಟುಗಳಾದ ತೂಕದ ಮಾತೊಂದು ನುಡಿ ನೀ। ಬಾಳ ಜ್ವಾಕೀಲೆ ನುಡಿದಂತೆ ನಡಿ, ಕರೆಯದೆ ಬರಬೇಡ ಕರೆದರೊಲ್ಲೆನಬೇಡ, (ಮಾತು ಕವನ) ನೀ ನನ್ನ ಸಂಗಾತಿ ಅಲ್ಲಲ್ಲಿ ಒಲಿ (ಒಡಲಿ ಕವನ) ಹಾರ್ವ, ಬಣಜಿಗ, ಕುರುಬ, ಕಬ್ಬಲಿಗ ಕುಡಿವುದೊಂದೇ ನೀರು, (ನಾವೆಲ್ಲ ಒಂದು) ಏಳಲಾರದ ಎತ್ತಮಳೆಯ ಮೇಲೆ ಬಿತ್ತು (ವಚನ) 'ನಿನ್ನ ಬಂಡಿಯ ಎತ್ತು ನಾನು। ಒಣಕಣಿಕೆಯಾದರೂ ಮೇಯಿಸು' (ವಚನ) ಎಂಬಂತಹ ನೂರಾರು ಸಾಲುಗಳ ಬಳಕೆ, ದೇಶಿಲಯಗಳಾದ,

'ಹಾಲು ಹೈನಕ್ಕೆ ಮುಂದ, ಕಾಳು ಕಡ್ಡಿಗೆ ಮುಂದ
ಧನ ಧಾನ್ಯಕ್ಕೆಲ್ಲ ತೌರೆಂದ। ನಿನ್ನೂರು
ಹಾಲು-ಜೇನಿನ ಹೊಳಿಯಂದ[3]'

ಎಂಬ ತ್ರಿಪದಿಯ ಬಳಕೆ, ದ್ವಿಪದಿ ಲಯಗಳ ಸೇರಿಸುವಿಕೆಯ ಅರಿವು ದೇಶಾಂಶ ಕಾವ್ಯದ ಸೋಪಜ್ಞತೆಯನ್ನು ಹೆಚ್ಚಿಸಿ ಕಪಾಡಿದ್ದನ್ನು ಕಾಣಲಾಗಿದೆ[4]. ಅವರ

---

[3] ಹಾಲು ಜೇನಿನ ಹೊಳಿ ಕವನ ಪು-೨.

[4] ವಿಕ್ರಮ ವಿಸಾಜಿ - ಬೀದರ ಜಿಲ್ಲಾ ದರ್ಶನ- ೨೦೦೫ ಪು-೧೦೯.

ಕೆಲ ತತ್ವಪದಗಳು, ಗೀಗೀ ಪದಗಳು, ಇಂಥ ಆಯಾಮಗಳನ್ನು ಹಿಡಿದಿಟ್ಟುಕೊಂಡಿರುವದನ್ನು ಅರಿಯಬಹುದಾಗಿದೆ.

ಹೆಣ್ಣಿನ ಶೋಷಣೆಯ ಹಲವು ನೆಲೆಗಳನ್ನು ಮತ್ತು ಗಂಡಿನ ಕಾರ್ಯವನ್ನು ತಿಳಿಸುವ ಚಡಪಡಿಕೆಯು ದೇಶಾಂಶ ಹೆಚ್ಚಿನ ಕವನ ಹಾಗೂ ವಚನಗಳಲ್ಲಿ ಕಾಣಸಿಗುತ್ತದೆ. ಅವುಗಳನ್ನು ಪ್ರೇಮಾ ಸಿರ್ಸೆ ಹಾಗೂ ವಿಜಯಶ್ರೀಯವರಿಗೆ ಹೋಲಿಸಿದರೆ, ದೇಶಾಂಶರು ಭಿನ್ನ ಆಶಯಗಳುಳ್ಳ ಕವಿಯಾಗಿ ಕಾಣಿಸುತ್ತಾರೆ. ಸಿರ್ಸೆ ಹಾಗೂ ಸಬರದವರಲ್ಲಿ ಆ ಶೋಷಣೆಯನ್ನು ಅರಿತು ಪ್ರತಿಭಟಿಸುವ ಗುಣವಿದ್ದರೆ, ದೇಶಾಂಶರಲ್ಲಿ ರೋಷಯುಕ್ತ ಪ್ರತಿಭಟನೆ ಹಾಗೂ ಎಚ್ಚರಿಕೆಯ ದನಿ ಇರುವದು ಗಮನಾರ್ಹವಾಗುತ್ತದೆ. ಇದು ಕವಿಯಿತ್ರಿಯರಲ್ಲಿ ವೈಯಕ್ತಿಕ ನೆಲೆಯಲ್ಲಿ ಹೆಚ್ಚು ಚರ್ಚೆಗೊಳಗಾಗಿದೆ ಎನಿಸುತ್ತಿದೆ. ಆದರೆ ದೇಶಾಂಶರಲ್ಲಿ ಬಹಳಷ್ಟು ಕಡೆ ಸಾರ್ವತ್ರಿಕ ಪರೆಭಾಷೆಯಲ್ಲಿ ಅದು ವ್ಯಕ್ತವಾಗಿದೆ ಎನಿಸುತ್ತದೆ.

ಹುಮನಾಬಾದಿನ ಬಂಡೆಪ್ಪಾ ಖೂಬಾ, ಹುಲಸೂರಿನ ಶ್ರೀಗಳಾದ ಶಿವಾನಂದ ಸ್ವಾಮಿಗಳು, ಹುಮನಾಬಾದ ಕರುಣಾ ಸಲಗರ, ಭಾಲ್ಕಿಯ ವೀರಶೆಟ್ಟಿ ಬಾವುಗೆ ಮೊದಲಾದವರು ದೇಶಾಂಶ ಹುಡಗಿಯವರಿಗಿಂತ ಈ ಮೊದಲೇ ಆಧುನಿಕ ವಚನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಹಾಗೆಯೇ ಬೀದರನ ಬಸವರಾಜ ಹದನೂರ, ಗುರುಸಿದ್ದಪ್ಪ ಸೋಮಶೆಟ್ಟಿ, ಗಿರಿಜಾ ಧರ್ಮರೆಡ್ಡಿ ಹಾಗೂ ಹಂಸಕವಿಯವರು ವಚನ ಕೃಷಿಯನ್ನು ಇಲ್ಲಿ ಹದಗೊಳಿಸಿಕೊಂಡಿದ್ದಾರೆ[5]. ಇವರೆಲ್ಲರ ಸಾಲಿನಲ್ಲಿ ಮುಂಚೂಣಿಯಲ್ಲಿ ನಿಲ್ಲಬಲ್ಲವರು ದೇಶಾಂಶರು ಎಂದೆನಿಸುತ್ತದೆ. ಶಾಂತಪ್ಪನವರು ಸಾತ್ವಿಕ ಮನದವರು. ಶರಣಜೀವಿಗಳು, ಹಿಂದಿನ ಶರಣರ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಾಗಿರುವವರು. ವಚನ ರಚನೆ ಮಾಡುತ್ತಿದ್ದೇನೆಂದರೆ ನನ್ನ ಮಾತುಗಳ ಪರಿಣಾಮ ಆಗಬೇಕಾದರೆ ಮಾತು ಮತ್ತು ಕೃತಗಳ ಮೇಳೈಕೆ ಇರಬೇಕು ಎಂದು ತಿಳಿದಂತಿದೆಯೆಂಬ ಭಾಸವಾಗುತ್ತದೆ. ಅದರಲ್ಲೂ ಸಮಾಜದ ಆಗು ಹೋಗುಗಳನ್ನು ಟೀಕಿಸುವವರು, ರಾಜಕಾರಣಿಗಳನ್ನು ವಿಡಂಬಿಸುವವರು ತಮ್ಮ – ನಡೆ– ನುಡಿಗಳನ್ನು ಹೊಂದಿಸಿಕೊಂಡಿರಬೇಕಾಗುತ್ತದೆ ಎಂದು ಅವರು ಭಾವಿಸಿದ್ದಾರೆ[6] ಎಂಬುದನ್ನು

---

[5] ದೇಶಾಂಶ ಹುಡಗಿ – ದಿಗಂಬರ ವಚನಗಳು –ನನ್ನ ನುಡಿಯಲ್ಲಿ ಪು–XVII.

[6] ಬಿ. ಮಹಾದೇವಪ್ಪ –ದಿಗಂಬರ ವಚನಗಳು – ಮುನ್ನುಡಿಯಲ್ಲಿ ಪು– VIII.

ಅರಿಯಬಹುದು. ಹೀಗಾಗಿ ಅವರ ದಿಗಂಬರ ವಚನಗಳು ಉಳಿದವರ ಚನಗಳಿಗಿಂತ ಹೆಚ್ಚು ವಿಡಂಬನಾತ್ಮಕವೆನಿಸುತ್ತವೆ.

ಜೀವನದ ವಿರೋಧಾಭಾಸಗಳ ಬಗ್ಗೆ ತುಂಬಾ ಕಾಳಜಿ ಹೊಂದಿರುವ 'ದೇಶಾಂಶ'ರು ಬೀದರ ಜಿಲ್ಲೆಯ ಜನಪದ ಬದುಕಿನಿಂದಲೇ ಹೊರಬಂದವರು. ಅವರ ಜಾನಪದ ಪ್ರಜ್ಞೆ ಉಳಿದ ವಚನಕಾರಿಗಿಂತ ತುಂಬಾ ಹೆಚ್ಚಾಗಿದೆ. ಹೀಗಾಗಿ ಅವರ ವಚನಗಳ ಲಯದಲ್ಲಿ ಈ ಜಾನಪದ ವಿಶೇಷತೆಯು ಮುಖ್ಯವಾಗಿದ್ದು, ಉಳಿದವರನ್ನು ಅದು ಮೀರಿಸ ನಿಲ್ಲುತ್ತದೆ.

'ಸುಳಿಗೇಡಿ ಅತ್ತಿ ಕಿಡಿಗೇಡಿ ಮಾವ
ಕುಂತುಂಬ ಗಂಡ ಈ ಮೂವರು ಹೆಣ್ಣಿಗೆ
ಕಡು ವೈರಿಗಳೆಂದ ದಿಗಂಬರ ಕರಿಬಸವೇಶ್ವರ'

'ಎತ್ತಾಗು ತೊತ್ತಾಗು ಕತ್ತೆ ಕುದುರೆಯಾಗು
ಉತ್ತಮಿಕೆಯ ಕಳಸವಾಗೆಂದ
ದಿಗಂಬರ ಕರಿಬಸವೇಶ್ವರ[7]'

ಈ ಜಿಲ್ಲೆಯ ಈ ರೀತಿಯ ಭಾಷೆಯಲ್ಲಿ ಅಭಿವ್ಯಕ್ತಗೊಂಡಿರುವ ಕವಿಯ ಭಾವನೆಗಳು ಓದುಗರಲ್ಲಿ ಭರವಸೆಯನ್ನು ಮೂಡಿಸುತ್ತವೆ. ಹುಟ್ಟು ಕವಿ ಹೃದಯದ ಕೆಂಪು ಅವರ ವಚನಗಳಲ್ಲಿ ವಿಶೇಷವಾಗಿದ್ದು, ಅವುಗಳಲ್ಲಿಯ ವ್ಯಂಗ್ಯ, ವಿಡಂಬನೆಗಳು ನೇರವಾಗಿ ಎದೆ ಮುಟ್ಟುತ್ತವೆ, ಇವರ ವಚನಗಳ ಹಿಂದಿರುವ ಸಾತ್ವಿಕತೆ, ಸಂತಾಪ, ನೈತಿಕ ಸಿಟ್ಟು ಹಾಗೂ ಪ್ರಾಮಾಣೀಕತೆಯು ಉಳಿದ ವಚನಕಾರರಿಗಿಂತ ಭಿನ್ನವಾಗಿದ್ದು, ದೇಶಾಂಶರಲ್ಲಿ ಜೀವನದ ಸಮೃದ್ಧ ಅನುಭವ ಹೆಚ್ಚಾಗಿರುವದನ್ನು ಅವರ ವಚನಗಳು ವ್ಯಕ್ತಗೊಳಿಸುತ್ತವೆ. ಈತನು ಈ ದಿಸೆಯಲ್ಲಿ ಇದ್ದುದ್ದನ್ನು ಇದ್ದಂತೆ ಹೇಳುವುದರಿಂದ ದೇಶಾಂಶರನ್ನು ಬೀದರ ಜಿಲ್ಲೆಯ 'ಸರ್ವಜ್ಞ'ನೆಂದು ವಿರೇಂದ್ರ ಸಿಂಪಿಯವರು ಅಭಿಪ್ರಾಯ ಪಡುತ್ತಾರೆ[8].

---

[7] ದಿಗಂಬರ ವಚನಗಳು – ವಚನಸಂಖ್ಯೆ–೧೯ ಮತ್ತು ೩೪೪ – ಪು ೭೭.

[8] ಚೇತನ ಶಿಲ್ಪಿ – ಪು–೧೫೭.

'ಕಾಡುವ ಅಳಿಯ ಮನೆ ಸೇರಿದರೆ
ಕಳ್ಳ ಬೆಕ್ಕು ಮನೆಸೇರಿದಂತೆ
ಕಾಡಾನೆ ಕಬ್ಬಿನ ತೋಟ ಹೊಕ್ಕಂತೆ
ಅತ್ತೆ-ಮಾವರ ಬಾಳು ಬೀಳಾಗುವುದೆಂದು'[9]

ಎಂಬಂತಹ ಹಲವು ವಚನಗಳ ಮೂಲಕ ಭಾಷೆಯಲ್ಲಿ ಹೊಸ ಸಂವೇದನೆಯನ್ನು ತಂದುಕೊಟ್ಟವರು ದೇಶಾಂಶರು. ಅವರ ಮಾನವೀಯತೆಯ ಅನೇಕ ಮುಖಗಳನ್ನು ಅವರ ಕವಿತೆ ಹಾಗೂ ವಚನಗಳಲ್ಲಿ ಕಾಣಬಹುದು. ಜೀವನ್ಮುಖಿ ಸಂಘರ್ಷಗಳನ್ನು ಆತ್ಮೀಯವಾಗಿ ಕಟ್ಟಿತೋರಿಸುವ ಈ ಕವಿಯ ಹೈದ್ರಾಬಾದ ಕರ್ನಾಟಕದಲ್ಲಿ ವಿಶೇಷತೆಯನ್ನು ಹೊಂದಿನಿಂತಿದ್ದು, ಈ ಭಾಗದಲ್ಲಿ ತಮ್ಮದೇ ಆದ ಪ್ರಭಾವವನ್ನು ಬೆಳೆಸಿದ್ದಾರೆ. ಅವರ ಸಾಮಾಜಿಕ ಪ್ರಜ್ಞೆ, ಕೆಳವರ್ಗದ ಮೇಲಿನ ಪ್ರೀತಿ, ಬಂಡಾಯ ಧೋರಣೆ, ಆತಂಕದ ಭಾವ, ಸಾಂಸ್ಕೃತಿಕ ಸಂವೇದನೆಗಳು ಅವರ ಕಾವ್ಯದಲ್ಲಿ ಮಡುಗಟ್ಟಿ ನಿಂತಿದ್ದು, ಅವುಗಳನ್ನು ಅಭಿವ್ಯಕ್ತ ಪಡಿಸುವ ರೀತಿಯಲ್ಲಿ ತಮ್ಮ ಸಮಕಾಲೀನರಿಗಿಂತ ಭಿನ್ನರಾಗಿ ತೋರುತ್ತಾರೆ. ಬೀದರ ಭಾಷೆಯ ಆತುಮಾತಿನ ಜಾಡನ್ನು ಸದಾ ಬಿಟ್ಟುಕೊಡದ ಇವರ ಕಾವ್ಯಶೈಲಿ ಓದುಗರಲ್ಲಿ ಆಶ್ಚರ್ಯ ಮೂಡಿಸತ್ತಿದ್ದು, ಸದಾ ತನ್ನ ನಾಡು-ನುಡಿ- ಜನರನ್ನು ಪ್ರೀತಿಸುವ ವಿಶಿಷ್ಟತನ ಅಲ್ಲಿ ಬೇಕಾದಷ್ಟು ಕಾಣಸಿಗುತ್ತದೆ. 'ಜೀವನ ಪ್ರೀತಿ'ಯನ್ನೇ ತಮ್ಮ ಕಾವ್ಯದ ಮುಖ್ಯ ಧಾತುವಾಗಿರಿಸಿಕೊಂಡಿರುವ ದೇಶಾಂಶರು ಅದರ ಸುತ್ತಲೂ ಕಾವ್ಯ ಕಟ್ಟಿ ಹಾಡಿದ್ದಾರೆ, ಕುಣಿದಿದ್ದಾರೆ ಈ ಪ್ರಮುಖ ಅಂಶವೇ ಅವರ ಸಾಹಿತ್ಯ ಜೀವನದ ಸಾರ್ಥಕತೆಯನ್ನು ಹೆಚ್ಚಿಸಿದೆ. ತಮ್ಮ ಇಳಿವಯಸ್ಸಿನಲ್ಲಿಯೂ ಪ್ರತಿಭಟನೆಯ ಕೆಚ್ಚಿನಿಂದ ಕಾವ್ಯ ಕಟ್ಟುತ್ತಿರುವ ದೇಶಾಂಶರು ತಮ್ಮ ಬರವಣಿಗೆಯನ್ನು ನಿರಂತರ ಜೀವನದ ಹುಡುಕಾಟವಾಗಿಸುವ ಮೂಲಕ ಜೀವನಕ್ಕೂ ತಮ್ಮ ಸಾಹಿತ್ಯಕ್ಕೂ ವಾಸ್ತವತೆಯನ್ನು ತಂದುಕೊಟ್ಟಿದ್ದಾರೆ ಎನ್ನಬಹುದು.

ಸ್ಥಾಪಿತ ಮೌಲ್ಯಗಳ ನಿರಾಕರಣೆ, ಹೊಸ ಮೌಲ್ಯದ ಅನ್ವೇಷಣೆಗಳು ಅವರ ಕಾವ್ಯದ ಹುಡುಕಾಟದಲ್ಲಿ ವ್ಯಕ್ತವಾಗಿದ್ದು, ಅವು ಗಮನ ಸೆಳೆಯುತ್ತವೆ. ಸಾಮಾಜಿಕ ಪ್ರಜ್ಞೆ, ಅಭಿವ್ಯಕ್ತಿಧೋರಣೆ, ಶರಣರ ಮಾದರಿ ಜೀವನದ ಹಿನ್ನೆಲೆಯಲ್ಲಿ ಬೀದರ ಜಿಲ್ಲೆಯ ಹೆಮ್ಮೆಯ ಕವಿಯಾಗಿ, ಬದುಕನ್ನು ರೂಪಿಸಿಕೊಂಡ ಬಗೆ ಎಂಥವರಿಗೂ

---

[9] ದಿಗಂಬರ ವಚನಗಳು – ಪು-೧೧೩

ಮಾರ್ಗದರ್ಶನ ನೀಡುವಂತಹದ್ದಾಗಿದ್ದು, ಅವರ ಈ ಬದುಕು-ಬರಹವನ್ನು ಗುರತಿಸಿ ನಾಡವರು ಅವರಿಗೆ ವಿವಿಧ ಪ್ರಶಸ್ತಿ, ಸನ್ಮಾನ ನೀಡಿ ಗೌರವಿಸಿದ್ದಾರೆ. ಅವರ ಈ ಮಾದರಿ ಬದುಕನ್ನು ಕಂಡು ಮುಂದಿನ ಜನಾಂಗ ಅವರಿಂದ ಕಲಿಯಬೇಕಾದದ್ದು ಏಷ್ಟಿದೆ? ಎಂಬುದನ್ನು ಅರ್ಥ ಮಾಡಿಕೊಳ್ಳಬಹುದೆನ್ನಬಹುದು.

ಒಟ್ಟಿನಲ್ಲಿ ಈ ಅಧ್ಯಯನದ ಫಲಕೃತಿ ಎಂದರೆ, ದೇಶಾಂಶ ಹುಡಗಿಯವರು ಶ್ರೇಷ್ಠ ಬರಹಗಾರ, ಶರಣ ಜೀವಿ, ಜಾನಪದ ಹಾಡುಗಾರ, ಸೃಜನಶೀಲ ಮನಸ್ಸಿನ ವ್ಯಕ್ತಿ, ನೇರ ನುಡಿಗೆ ಹೆಸರುವಾಸಿ, ಸಾಹಿತಿ, ಸಾಹಿತಿಗಳ ಸೃಷ್ಟಿಕರ್ತ, ಧರಿನಾಡ ಕನ್ನಡ ಸಂಘದ ಅಧ್ಯಕ್ಷ, ನಾಡು-ನುಡಿ ಪ್ರೇಮಿ, ರಂಗ ಕಲಾವಿದ, ಉತ್ತಮ ಶಿಕ್ಷಕ, ಅಭಿವೃದ್ಧಿಯ ಕನಸುಗಾರ, ಅನುವಾದಕ, ಸಣ್ಣ ಕತೆಗಾರ, ತತ್ವಪದಕಾರ, ಸಂಪಾದಕ, ಪತ್ರಕರ್ತೃ, ಸಾಕ್ಷರತಾಗುರು, ಆಧುನಿಕ ವಚನಕಾರ, ಎಲ್ಲಕ್ಕಿಂತ ಹೆಚ್ಚಾಗಿ 'ಜೀವನ ಪ್ರೀತಿ'ಯ ಹರಿಕಾರನೆಂದು ಹೇಳಬಹುದು. ಬೀದರ ಜಿಲ್ಲೆಯ ಕವಿಗಳ ಹಾಗೂ ಸಾಹಿತಿಗಳ ಸಾಲಿನಲ್ಲಿ ಅವರ ಸ್ಥಾನ ತುಂಬಾ ಹಿರಿದಾದುದು.

# ಶಾಂತಪ್ಪ ದೇವರಾಯ (ದೇಶಾಂಶ ಹುಡಗಿ)

## ವ್ಯಕ್ತಿ ಚಿತ್ರ

ಹೆಸರು : ಶಾಂತಪ್ಪ ತಂದೆ ಶರಣಪ್ಪ ದೇವರಾಯ
ತಾಯಿ ಭೀಮಬಾಯಿ ದೇವರಾಯ

ರೂಢಿ ಹೆಸರು : ಶಾಂತಪ್ಪ ದೇವರಾಯ

ಕಾವ್ಯ ನಾಮ : ದೇಶಾಂಶ ಹುಡಗಿ (ದೇವರಾಯ ಶಾಂತಪ್ಪ ಶರಣಪ್ಪ ಇವುಗಳ ಅಧ್ಯಕ್ಷರಗಳೇ ದೇಶಾಂಶ, ಊರು ಹುಡಗಿ)

ಊರು : ಹುಡಗಿ ತಾ. ಹುಮನಾಬಾದ ಜಿ. ಬೀದರ.

ವಿಳಾಸ : ಮ.ನಂ. ೨–೭೫೮, ಅಲ್ಲಮ ಪ್ರಭುನಗರ, ಗೊರನಳ್ಳಿ ವಿಸ್ತರಣೆ ಬೀದರ–೫೮೫ ೪೦೩.

ಹುಟ್ಟಿದ ತಾರೀಖು : ೬–೧೧–೧೯೩೬ (೬೯ ವರ್ಷಗಳ ವಯಸ್ಸು ದಾಖಲೆಗಳ ಪ್ರಕಾರ ನೈಜ ವಯಸ್ಸು ೭೫ ವರ್ಷ)

ವಿದ್ಯಾರ್ಹತೆ : ಬಿ.ಎ., ಬಿ.ಎಡ್. ಸಾಹಿತ್ಯ ವಿಶಾರದ (ಹಿಂದಿ), ಸಂಸ್ಕೃತಿ ಪ್ರಾರಂಭಿಣಿ.

ನೌಕರಿಗೆ ಸೇರಿದ್ದು : ಪ್ರಾಥಮಿಕ ಶಿಕ್ಷಕರ ನೌಕರಿಗೆ ಸೇರಿದ್ದು ೧೯೫೪ ರಲ್ಲಿ. ಪ್ರೌ.ಶಾಲಾ ಶಿಕ್ಷಕರ ಬಡ್ತಿ–೧೯೬೫ ರಲ್ಲಿ ಮುಡಬಿಯಲ್ಲಿ, ವಯಸ್ಕರ ಶಿಕ್ಷಣ ಯೋಜನಾಧಿಕಾರಿಯಾಗಿ ೧೯೮೨ ರಲ್ಲಿ ಭಾಲ್ಕಿಯಲ್ಲಿ, ಶಾಲೆ ತನಿಖಾಧಿಕಾರಿಯಾಗಿ ೧೯೯೨ ರಲ್ಲಿ ಭಾಲ್ಕಿಯಲ್ಲಿ ನಿವೃತ್ತಿ ೩೦–೧೧–೧೯೯೪ ರಲ್ಲಿ ಭಾಲ್ಕಿಯಿಂದ.

ಅಭ್ಯಾಸ : ಪ್ರಾಥಮಿಕ ಅಭ್ಯಾಸಃ ಕನ್ನಡದಲ್ಲಿ ತಂದೆಯಾದ ಶರಣಮಾರ್ಗಿ ಶರಣಪ್ಪ ದೇವರಾಯ ರಿಂದ ಆ ಮೇಲೆ ದೇವಿಂದ್ರಪ್ಪ ಬಡಿಗೇರರ ಖಾಸಗಿ ಶಾಲೆಯಲ್ಲಿ ಐದನೇ ವರ್ಗದ ವರೆಗೆ ಕನ್ನಡ, ಮರಾಠಿ ಮೋಡಿ ಅಭ್ಯಾಸ, ಶ್ರೀ ರೇವಣಪ್ಪ ಹೂಗಾರ ಹುಡಗಿ, ಶ್ರೀ ಬಸವಣಪ್ಪ ಹೂಗಾರ–ಇಂಗ್ಲೀಷ ಉರ್ದು ಶಿಕ್ಷಕರು. ಆರು ವರ್ಷ ಶಾಲೆ ಬಿಟ್ಟೆ (ನೆಚ್ಚಿನ ಶಿಕ್ಷಕರು ಶ್ರೀ ದೇವಿಂದ್ರಪ್ಪ ಬಡಿಗೇರ).

| | | |
|---|---|---|
| | ಮಾಧ್ಯಮಿಕ ಅಭ್ಯಾಸ | ವರ್ಗ–ಊರು–ಇಸವಿ |
| ನೆಚ್ಚಿನ ಶಿಕ್ಷಕರು : | ಸರಕಾರಿ ಮಾಧ್ಯಮಿಕ ಶಾಲೆ ಚಿಟಗುಪ್ಪ | ಮಾಧ್ಯಮ ಇತ್ಯಾದಿ. |
| | ಶ್ರೀ ಯಶವಂತರಾವ ಮಂದರವಾಡಕರ | ೫ ನೇ ಉರ್ದು ಮಾಧ್ಯಮದಲ್ಲಿ. |
| | ಶ್ರೀ ಕೇಶವರಾವ ದಾಂಡೇಕರ | ೬ ನೇ ೧೯೫೪–೪೮ ೧೯೪೮–೮೬. |
| | ಶ್ರೀ ಕರಬಸಪ್ಪ ಹೆಗ್ಗೆ | ೭ ನೇ ಮರಾಠಿ ಮಾಧ್ಯಮಿಕ ೧೯೪೯–೫೦. |

## ಪ್ರೌಢ ಶಾಲೆ ಅಭ್ಯಾಸ ಸ.ಪ್ರೌ.ಶಾಲೆ ಸೇಡಂ ಜಿ. ಗುಲಬರ್ಗಾ

| | | | |
|---|---|---|---|
| ನೆಚ್ಚಿನ ಗುರುಗಳು : | ಶ್ರೀ ಸೈಯದ ಗೌಸ್–ಇಂಗ್ಲೀಷ ಶಿಕ್ಷಕರು ಶ್ರೀ ದತ್ತಾತ್ರೇಯರಾವ ಕುಲಕರ್ಣಿ ಕನ್ನಡ ಶಿಕ್ಷಕರು. | ೮ನೇ | ಇಂಟರ್ ಮಿಡಿಯೆಟ್ ಕಾಲೇಜು ಗುಲಬರ್ಗಾ ಹಾಗೂ ಸ.ಪ್ರೌ.ಶಾಲೆ ಸೇಡಂ |
| | ಶ್ರೀ ಬಿ. ಕಿಶನರಾವ ವಿಜ್ಞಾನ ಶಿಕ್ಷಕರು | ೯ನೇ | ಸರಕಾರಿ ಪ್ರೌಢ ಶಾಲೆ ಸೇಡಂ ೧೯೫೧–೫೨ |
| | ಶ್ರೀ ರಾಘವೇಂದ್ರರಾವ – ಹಿಂದಿ ಶಿಕ್ಷಕರು | ೧೦ ನೇ | ಎಚ್.ಎಸ್.ಸಿ. ತೇರ್ಗಡೆ ೧೯೫೨–೫೩ ರಿಜಿ. ನಂ. ೨೧೪೨. |

ಅನ್ನ ಹಾಕಿ ಸಲಹಿ:
೧. ದಿ. ರಾಜಾರಾಮ ಪಂಡಿತ ನಂದಗಾಂವ (ಚಿಟಗುಪ್ಪದಲ್ಲಿ)
೨. ಲಿಂ. ವೀರಭದ್ರಪ್ಪ ಉನ್ನಿ ಚಿಟಗುಪ್ಪ.
೩. ಲಿಂ. ಶರಣಪ್ಪ ಬೋಳದ ಸೇಡಂ.
೪. ಶ್ರೀ ಶಿವರುದ್ರಪ್ಪ ಬೋಳದ ಸೇಡಂ.
೫. ಲಿಂ. ಬಸವಲಿಂಗಪ್ಪ ಮಂಗಲಗಿ ಸೇಡಂ.
೬. ಲಿಂ. ಚಂದ್ರಪ್ಪ ಯಾಕಾಪೂರ ಸೇಡಂ.
೭. ದಿ. ವೆಂಕಟರಾವ ಕುಲಕರ್ಣಿ ಹುಡಗಿ (ಹೈದ್ರಾಬಾದಲ್ಲಿ)

### ಇಂಟರ್ ಮಿಡಿಯೆಟ್ ಅಭ್ಯಾಸ

ಹೈದ್ರಾಬಾದಿನ ನಿಜಾಮ್ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರ ವಿದ್ಯಾರ್ಥಿಯಾಗಿ ಎರಡು ತಿಂಗಳು, ವರ್ಗ ಶುಲ್ಕ ಕೊಡಲಾಗದ ಕಾರಣ ಹೊರ ಹಾಕಲಾಯಿತು. ವಿವೇಕ ವರ್ಧಿನಿ ಹೈದ್ರಾಬಾದನಲ್ಲಿ ಇಂಟರ್ ಕಲಾ (ಆರ್ಟ್ಸ್) ವಿಧ್ಯಾರ್ಥಿಯಾಗಿ ಇತಿಹಾಸ, ನಾಗರಿಕ ಶಾಸ್ತ್ರ ಹಾಗೂ ಕನ್ನಡ ವಿದ್ಯಾರ್ಥಿಯಾಗಿ, ಅನಾರೋಗ್ಯ, ಕಾಲೇಜು ಬಿಟ್ಟು ಬಿಟ್ಟೆ.

೧೯೫೪ ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕನಾದ ಮೇಲೆ ೧೯೫೯–೬೦ ರಲ್ಲಿ ಸಾಹಿತ್ಯ ಸಮ್ಮೇಲನ ಪ್ರಯಾಗದಿಂದ ಸಾಹಿತ್ಯ ವಿಶಾರದ ಪಾಸಾದೆ.

೧೯೬೦–೬೧ ರಲ್ಲಿ ಮಧ್ಯ ಪ್ರದೇಶದ ಇಂದೂರಿನಿಂದ ಇಂಟರ್ ಮಿಡಿಯಟ್ (ಕಲಾ) ಪಾಸಾದೆ. ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೬೨–೬೩ ಬಾಹ್ಯ ವಿದ್ಯಾರ್ಥಿಯಾಗಿ ಬಿ.ಎ. ಕಲಾ ಮೆಜರ್ ಹಿಂದಿ ವಿಷಯ ತೆಗೆದುಕೊಂಡು, ಮೈನರ್ ಕನ್ನಡ, ಸಮಾಜಶಾಸ್ತ್ರ ಉತ್ತೀರ್ಣನಾದೆ.

೧೯೬೦ ಬಿ.ಎಡ್. ಸರಕಾರಿ ಬಿ.ಎಡ್. ಕಾಲೇಜು ಗುಲಬರ್ಗಾದಿಂದ ಪಾಸಾದೆ.

ಸಂಸ್ಕೃತ ಪ್ರಾರಂಭಿಣಿ ಪರೀಕ್ಷೆ ಪಾರಡಿಯಿಂದ (೧೯೫೬ ರಲ್ಲಿ) ಪಾಸಾದೆ ೧೯೫೭-೫೮ ರಲ್ಲಿ ಎಸ್.ಟಿ.ಬಿ.ಟಿ. ಶಿಕ್ಷಕರ ತರಬೇತಿ ಪಾಸಾದೆ.

ಹವ್ಯಾಸಗಳು : ಈಜುಗಾರಿಕೆ, ಜಾನಪದ ಹಾಡುಗಾರಿಕೆ, ನಾಟಕಾಭಿನಯ, ರಂಗ ನಿರ್ದೇಶನ, ಕೊಳಲುವಾದನ, ಬಾಸುಂದಿ, ಜಾಮೂನು, ಭಜ್ಜಿ, ಭರ್ತ, ಮಿರ್ಚಿಭಜಿ, ಚಕಲಿಗಳ ಪ್ರೇಮಿ ಸಾಹಿತ್ಯ ರಚನೆ, ಸಾಹಿತ್ಯ – ಸಾಹಿತಿಗಳ ಸೇವೆ, ಸಮಾಜ ಕಾರ್ಯ, ಪ್ರಾಮಾಣೀಕ ಶಿಕ್ಷಕ ವೃತ್ತಿ.

**ಭಾಗವಹಿಸಿದ ಕಾರ್ಯಾಗಾರಗಳು:**

**ರಾಜ್ಯ ಮಟ್ಟದ ಕಾರ್ಯಾಗಾರಗಳು:**

೧. ಮೂಲಕಿಯಲ್ಲಿ ಮಕ್ಕಳ ಕಾರ್ಯಗಾರ – ರಸಿಕ ಪುತ್ತಿಗೆ ಅಧ್ಯಕ್ಷತೆಯಲ್ಲಿ (೧೯೯೨) ರಲ್ಲಿ.

೨. ಹೆಗ್ಗೋಡಿನಲ್ಲಿ ನವಸಾಕ್ಷರ ಕಾರ್ಯಾಗಾರ – ಕೆ.ವಿ. ಸುಬ್ಬಣ್ಣ ಶಿವರಾಮ ಕಾರಂತರ ನೇತೃತ್ವದಲ್ಲಿ (೧೯೯೩ ರಲ್ಲಿ)

೩. ಶಿವಾರ ಗುಡ್ಡ
೪. ಮಂಡ್ಯ
೫. ಮೈಸೂರು
೬. ಬೆಂಗಳೂರು
೭. ಬಸವಕಲ್ಯಾಣ
೮. ಬೀದರ.

(೩–೮) ರಾಜ್ಯ ಮಟ್ಟದ ಸಾಕ್ಷರತಾ ಕಾರ್ಯಾಗಾರಗಳು.

**ರಾಷ್ಟ್ರ ಮಟ್ಟದ ಸಾಕ್ಷರತಾ ಕಾರ್ಯಾಗಾರಗಳು:**

೧. ಮಧ್ಯ ಪ್ರದೇಶದ ಖಂಡ್ವಾದಲ್ಲಿ – ಆಂಧ್ರ, ಕೇರಳ, ತಮಿಳುನಾಡು, ಕರ್ನಾಟಕ, ಪಾಂಡಿಚೇರಿಗಳ ಸಂಪನ್ಮೂಲ ವ್ಯಕ್ತಿಗಳಿಗೆ ದುಭಾಷಿಯಾಗಿ (೧೯೯೪ ರಲ್ಲಿ)

೨. ಆಂಧ್ರದ ಮೇದಕನಲ್ಲಿ ಕನ್ನಡ ಸಾಕ್ಷರತಾ ಪ್ರಚಾರಕನಾಗಿ (೧೯೯೨ ರಲ್ಲಿ).

**ಪತ್ರಿಕಾ ರಂಗದಲ್ಲಿ:**

೧. ಕೈ ಬರಹದ ಸೇಡಂ ಶಾಲಾ ಪತ್ರಿಕೆ – ಸಂಪಾದಕ ೧೯೫೩.

೨. ಕೈ ಬರಹದ ಮುಡಬಿ ಶಾಲಾ ಪತ್ರಿಕೆ–ಸಂಪಾದಕ ೧೯೬೮.

೩. ಅಕ್ಷರ ಕಾರಂಜಾ ಸಾಕ್ಷರತಾ ಪತ್ರಿಕೆ ಬೀದರ–ಸಂಪಾದಕ ೧೯೯೪ ರಿಂದ.

೪. ಶಾಂತಿ ಕಿರಣ ದ್ವೈಮಾಸಿಕ ಪತ್ರಿಕೆ–ಸಹ ಸಂಪಾದಕನಾಗಿ ೧೯೮೮ ರಿಂದ ೧೯೯೯ ವರೆಗೆ.

೫. ಉತ್ತರ ಕರ್ನಾಟಕ ಸಾಹಿತ್ಯ ಅಂಕಣಕಾರನಾಗಿ ೧೯೯೨-೯೩ ವರೆಗೆ.
೬. ಪಬ್ಲಿಕ್ ಪತ್ರಿಕೆ ನಿರಂತರ ಬರಹಗಾರನಾಗಿ ೧೯೯೪ ರ ವರೆಗೆ.
೭. ವಚನ ಕ್ರಾಂತಿಯ ಸಾಹಿತ್ಯ ಬರಹಗಾರನಾಗಿ ೨೦೦೩ ರಿಂದ ೨೦೦೪ ರ ವರೆಗೆ.
೮. ಸಂಸ್ಕೃತಿ ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯನಾಗಿ ೨೦೦೩ ರಿಂದ.
೯. ಧರ್ಮೋಪದೇಶ ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯನಾಗಿ ಸಹ ಸಂಪಾದಕನಾಗಿ.
೧೦. ವಿಶ್ವ ಕಲ್ಯಾಣವಾರ ಪತ್ರಿಕೆಯ ಬರಹಗಾರ (೧೯೬೮ ರಿಂದ).

**ಆಕಾಶವಾಣಿ – ದೂರದರ್ಶನಗಳಲ್ಲಿ:**

೧. ಆಕಾಶವಾಣಿ ಚಿಂತನಗಳು (ಆಕಾಶವಾಣಿ ಗುಲಬರ್ಗಾ).
೨. ಶಹಾಬಾದನಲ್ಲಿ ಶ್ರಾವಣ ಕವಿಗೋಷ್ಠಿ (ಆಕಾಶವಾಣಿ ಗುಲಬರ್ಗಾ)
೩. ದೂರದರ್ಶನ ಗುಲಬರ್ಗಾದಲ್ಲಿ ಕವಿತಾ ವಾಚನ.

**ಸಭೆ ಸಮಾರಂಭಗಳು:**

೧. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಕೊಪ್ಪಳದ ಭಾವೈಕ್ಯತಾ ಕವಿಗೋಷ್ಠಿಯಲ್ಲಿ ಕವಿತಾ ವಾಚನ.
೨. ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ಬೆಳಗಾಂವದಲ್ಲಿ ವಚನ ವಾಚನ (೨೦೦೦ ದಲ್ಲಿ).
೩. ದೇಸೀ ಸಮ್ಮೇಳನ ೨೦೦೩ ರಲ್ಲಿ ಸಂವಾದಕನಾಗಿ (ದಕ್ಷಿಣ ಭಾರತ ದೇಸೀ ಸಮ್ಮೇಳನ ಬೀದರ)
೪. ರಾಜ್ಯ ಮಟ್ಟದ ಅನೇಕ ವಿಚಾರ ಸಂಕಿರಣಗಳಲ್ಲಿ.
೫. ಬೀದರ ಜಿಲ್ಲಾ ಎಂಟನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿ ೨೦೦೪ ರಲ್ಲಿ.

**ಸಂಘ ಸಂಸ್ಥೆಗಳು:**

೧. ಕಾರ್ಯದರ್ಶಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ತಾ. ಹುಮನಾಬಾದ.
೨. ಜಿಲ್ಲಾ ಕನ್ನಡ ಲೇಖಕರ ಬಳಗದ ಭಾಲ್ಕಿ ತಾಲೂಕಾದ ಸಂಯೋಜಕನಾಗಿ (೧೯೯೪ ರ ವರೆಗೆ).
೩. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನ ಅಜೀವ ಸದಸ್ಯನಾಗಿ.
೪. ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ (ರಿ) ಬೀದರದ ಸಂಸ್ಥಾಪಕ ಅಧ್ಯಕ್ಷನಾಗಿ (೧೯೯೯ ರಿಂದ ಇಲ್ಲಿಯ ವರೆಗೆ)

**ಕನ್ನಡ ಸೇವೆ:**

೧. ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಕನ್ನಡ ಪ್ರಾರ್ಥನೆ ಹಾಡುವೆನೆಂದು ಹಟ ಹಿಡಿದು ಅಬ್ದುಲ ರಜಾಖ ಮುಖ್ಯೋಪಾಧ್ಯಾಪಕನಿಂದ ಏರುಗಟ್ಟಿ ಹೊಡೆಯಿಸಿಕೊಂಡದ್ದು.
೨. ಮುಡಬಿಯಲ್ಲಿ ಮರಾಠಿ ಹೈಸ್ಕೂಲ್ ಸ್ಥಾಪನೆ ವಿರುದ್ಧ ಏಕಾಂಗಿಯಾಗಿ ಪ್ರತಿಭಟಿಸಿದ್ದು.

೩. ಹುಡಗಿ ಹಾಗೂ ಮುಡಬಿ ಗ್ರಾಮಗಳಲ್ಲಿ ವಚನ ಸಾಹಿತ್ಯ ಪ್ರಚಾರ ಮಾಡಿದ್ದು.

೪. ಬಾಲ ವಿದ್ಯಾರ್ಥಿಯಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾದದ್ದು – ವಂದೇ ಮಾತರಂ ಹಾಡು ಹಾಡಿ ಬಾರು ಕೋಲಿನಿಂದ ಹೊಡೆಯಿಸಿಕೊಂಡದ್ದು – ಅಲ್ಲಾ ಹೋ ಅಕಬರ್ ಅನ್ನ ಲಾರನೆಂದು ಹಟ ಹಿಡಿದದ್ದು.

೫. ಕನ್ನಡ ಕವಿಗಳು ಹಾಗೂ ಸಾಹಿತಿಗಳನ್ನು ಪ್ರೋತ್ಸಾಹಿಸಿ ಲೇಖಕರ ಹಿಂಡನ್ನು ಕಟ್ಟಿದ್ದು, ಧರಿನಾಡು ಕನ್ನಡ ಸಂಘದ ಮೂಲಕ ಉಪಯೋನ್ಮುಖ ಬರಹಗಾರರಿಗೆ ವೇದಿಕೆಯನ್ನು ಒದಗಿಸಿದ್ದು.

೬. ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ ಬೀದರದಿಂದ ಕನ್ನಡದಲ್ಲಿ ೨೫ ಮೌಲಿಕ ಕೃತಿಗಳನ್ನು ಪ್ರಕಟಿಸಿದ್ದು.

೭. ಕಛೇರಿಯಲ್ಲಿ ಕನ್ನಡ ಬಳಕೆ ಮಾಡುವಂತೆ ಸಹೋದ್ಯೋಗಿಗಳಿಗೆ ಪ್ರೋತ್ಸಾಹಿಸಿದ್ದು, ಒತ್ತಾಯಿಸಿದ್ದು.

೮. ಸಾಕ್ಷರತಾ ಆಂದೋಲನದಲ್ಲಿ ಕನ್ನಡ ಪ್ರಚಾರ ಮಾಡಿದ್ದು, ಅನ್ಯಭಾಷಿಕರಿಗೆ ಕನ್ನಡ ಕಲಿಸಿದ್ದು.

೯. ಬೀದರ ಕಮಲನಗರ, ಡೋಣಗಾಂವ, ಉದಗೀರ, ಭಾಲ್ಕಿ, ಬಸವಕಲ್ಯಾಣಗಳಲ್ಲಿ ಕನ್ನಡ ಸಾಹಿತ್ಯ ಕಾರ್ಯಕ್ರಮ ನಡೆಸಿದ್ದು, ಕಮಲನಗರದಲ್ಲಿ ಕತೆಗಾರ ಸಮ್ಮೇಳನ, ಸಿದ್ದೇಶ್ವರದಲ್ಲಿ ೨೨–೨–೨೦೦೪ ರಲ್ಲಿ ಧರಿನಾಡು ಕನ್ನಡ ಸಾಹಿತ್ಯ ಸಮ್ಮೇಳನ ತಾಲೂಕಾ ಮಟ್ಟದಲ್ಲಿ ನಡೆಸಿದ್ದು, ೨೬–೧೨–೨೦೦೪ ರಂದು ಜ್ಯೋತಿರ್ಲಿಂಗಾಶ್ರಮ ಯರಬಾಗದಲ್ಲಿ ಬಸವಕಲ್ಯಾಣ ತಾಲೂಕಾ ಮಟ್ಟದ ಧರಿನಾಡು ಕನ್ನಡ ಸಾಹಿತ್ಯ ಸಮ್ಮೇಳನ ನಡೆಸಿದ್ದು, ಔರಾದ ತಾಲೂಕಿನಲ್ಲಿ ವಲಯ ಮಟ್ಟದ ಸಾಹಿತ್ಯ ಸಮ್ಮೇಳನ ನಡೆಸಿದ್ದು (ಕಸಾಪ ನೆರವಿನೊಂದಿಗೆ).

**ರಂಗಭೂಮಿ ಸೇವೆ:**

೧. ಸುಮಾರು ೨೫ ಸಾಮಾಜಿಕ ನಾಟಕಗಳಲ್ಲಿ ಹಾಸ್ಯ ಪಾತ್ರ.

೨. ಸುಮಾರು ೨೦ ಸಾಮಾಜಿಕ ನಾಟಕಗಳು ನಿರ್ದೇಶನ.

೩. ಉತ್ಪಲದತ್ತರ ಸೂರ್ಯಶಿಕಾರಿ ನಾಟಕದಲ್ಲಿ ವಿಜ್ಞಾನಿ ಕಲ್ಹಣನ ಪಾತ್ರಧಾರಿಯಾಗಿ ಅಭಿನಯ (ರಾಷ್ಟ್ರ ಮಟ್ಟದಲ್ಲಿ ಉತ್ತಮ ನಾಟಕವೆಂದು ಆಯ್ಕೆ).

**ಪ್ರಕಟಿತ ಕೃತಿಗಳು:**

೧. ಗ್ರಾಮ ಶಿಲ್ಪಿಗಳು (ವ್ಯಕ್ತಿ ಚಿತ್ರಗಳು – ಇತರರೊಂದಿಗೆ–೧೯೮೦) – ಗ್ರಾಮ ಸನ್ಮಾನ ಸಮಿತಿ ಹುಡಗಿ.

೨. ಬದುಕಿನ ಸುತ್ತ (ಕವನ ಸಂಕಲನ – ೧೯೮೮)–ಖಡ್ಕೆ ಪ್ರಕಾಶನ ಬೀದರ.

೩. ಅಕ್ಷರ ಜ್ಯೋತಿ (ಸಾಕ್ಷರತಾ ಗೀತೆಗಳು – ೧೯೯೩) – ಕನ್ಯಾಕುಮಾರಿ ಪ್ರಕಾಶನ ಬೀದರದಿಂದ.

೪. ಅಧ್ಯಾತ್ಮವಾದಿ ವಿಶ್ವ ವಿಭೂತಿ ಮಹಾತ್ಮಾ ಬಸವೇಶ್ವರ – ೧೯೯೫ (ಡಾ. ಭಗವಾನದಾಸ ತಿವಾರಿಯವರ ಹಿಂದಿ ಕೃತಿಯ ಕನ್ನಡಾನುವಾದ) – ಕಲ್ಯಾಣ ಕರ್ನಾಟಕ ಪ್ರಕಾಶನ ಮುಕ್ತಿ ಮಂದಿರ, ಬೀದರ.

೫. ನಾ ಕಂಡ ನನ್ನವರು (ವ್ಯಕ್ತಿ ಚಿತ್ರಗಳು–೧೯೯೫) – ಕನ್ಯಾಕುಮಾರಿ ಪ್ರಕಾಶನ ಬೀದರ.

೬. ಬೀದರ ಜಿಲ್ಲೆಯ ಬರಹಗಾರರು (ವ್ಯಕ್ತಿ ಚಿತ್ರಗಳು–೧೯೯೮) ಕ.ಸಾ.ಪ. ಬೀದರ.

೭. ಸಿದ್ಧಾರಾಮೇಶ್ವರ ವಚನಗಳು (ಸಂಪಾದನೆ–೧೯೯೮) ಕಲ್ಯಾಣ ಕರ್ನಾಟಕ ಪ್ರಕಾಶನ, ಮುಕ್ತಿ ಮಂದಿರ ಬೀದರ.

೮. ಬೀದರ ಜಿಲ್ಲೆಯ ತತ್ವ ಪದಕಾರರು (ವ್ಯಕ್ತಿ ಚಿತ್ರಗಳು–೧೯೯೮) ಗುಲಬರ್ಗಾ ವಿಶ್ವವಿದ್ಯಾಲಯ ಪ್ರಸಾರಾಂಗದಿಂದ.

೯. ಧರಿನಾಡಿನ ಕಾವ್ಯ (ಸಂಪಾದನೆ–೨೦೦೧) ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನಿಂದ.

೧೦. ಬಸವ ಶಿಶು (ವ್ಯಕ್ತಿ ಚಿತ್ರ–ಸಂಪಾದನೆ ೨೦೦೩)– ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ, ಬೀದರದಿಂದ.

೧೧. ಗುರುಪುತ್ರ (ವ್ಯಕ್ತಿಚಿತ್ರ – ಸಂಪಾದನೆ – ೨೦೦೩) – ಕನ್ಯಾಕುಮಾರಿ ಪ್ರಕಾಶನ ಬೀದರ.

೧೨. ಕಾವ್ಯ ಕಾರಂಜಿ (ಸಂಪಾದನೆ – ೨೦೦೩ ಹಂಶಕವಿಯೊಂದಿಗೆ ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ(ರಿ) ಬೀದರದಿಂದ.

**ಸಾಕ್ಷರತಾ ಪ್ರಕಟಣೆಗಳು:**

ಅಕ್ಷರ ದೀಪ – ೧,೨,೩ (ಇತರರೊಂದಿಗೆ) – ಬೀ.ಸಾ. ಸಮಿತಿ ಬೀದರ.

– ಬೀ.ಸಾ. ಸಮಿತಿ ಬೀದರ.

**ಧ್ವನಿಸುರಳಿಗಳು:**

೧. ಅಕ್ಕ ತಂಗಿ ಅವ್ವ ದೇರೆ ಎಂಬ ಸಾಕ್ಷರತಾ ಗೀಗಿ ಪದ್ಯ – ಬೀ.ಸಾ. ಸಮಿತಿ ಬೀದರ.

೨. ಏಳು ಎಚ್ಚರಾಗು ನಾರಿ – ಜಾಗ್ರತೆ ಗೀತೆ. – ಬೀ.ಸಾ. ಸಮಿತಿ ಬೀದರ.

**ಅಪ್ರಕಟಿತ ಕೃತಿಗಳು:**

೧. ದಿಗಂಬರ ವಚನಗಳು (ಸುಮಾರು ೧೦೦೦ ವಚನಗಳು)

೨. ಬಚ್ಚನ್ನನ ಮಧುಶಾಲಾ (ಕನ್ನಡಕ್ಕೆ ೧೩೫ ರುಬಾಯಿಗಳು)

೩. ಹುಂಬನ ಹಾಡುಗಳು (ಆತುನುಡಿಯಲ್ಲಿ ೧೦೦೦ ದ್ವಿಪದಿಗಳು)

೪. ಪ್ರಚಲಿತ (ಸುಮಾರು ೧೦೦೦ ಕ್ಕೂ ಮೀರಿದ ರುಬಾಯಿಗಳು)
ಹೆಣ್ಣು ಹುಟ್ಟಿದರೆ, ರೈತನ ಆತ್ಮಹತ್ತೆ, ವಚನಾಂಕಿತ ತಿರುಚುವಿಕೆ, ವರದಕ್ಷಿಣೆ, ಶೋಷಣೆ, ಭ್ರಷ್ಟಾಚಾರ, ಮುಖವಾಡಗಳು ಕುರಿತು ಸುಮಾರು ೧೦೦೦ ಪ್ರತಿಕ್ರಿಯೆಗಳು.

೫. ಬೀದರ ಜಿಲ್ಲೆಯಲ್ಲಿ ಕನ್ನಡ ಕಟ್ಟಿದವರು (ವ್ಯಕ್ತಿ ಚಿತ್ರಗಳು ಕರ್ನಾಟಕ ಸಾಹಿತ್ಯ ಅಕಾಡೆಮಿ ಆದೇಶದ ಮೇರೆಗೆ)

೬. ಅಷ್ಟೂರಿನ ಅಲ್ಲಮ ಪ್ರಭು ಅಹ್ಮದಷಹವಲಿ (ಕರ್ನಾಟಕ ಸಾಹತ್ಯ ಅಕಾಡೆಮಿಯ ಆದೇಶದ ಮೇರೆಗೆ)

೭. ಮಾಸ್ತರನ ಮನೆ (ಸಣ್ಣ ಕತೆಗಳು – ೧೫)

೮. ಹೋಳಿಯ ನೂರು ಹಾಡುಗಳು (ಸ್ವರಚಿತ ಹಾಡುಗಳು).

೯. ಬಸವಣ್ಣನವರು ೧೫೦ ವಚನಗಳು (ಹಿಂದಿಗೆ ಅನುವಾದ).

೧೦. ಜನನಾಯಕ ಬಸವರಾಜ ಪಾಟೀಲ ಅಟ್ಟೂರು (ಎಚ್.ಸಿ. ಖಡ್ಕೆ ಹಾಗೂ ಬಾಬುರಾವ ವಡ್ಡೆ ಪ್ರೇರಣೆಯಿಂದ)

೧೧. ಹಿಂತಿರುಗಿ ನೋಡಿದಾಗ (ಆತ್ಮ ಚರಿತ್ರೆ).

೧೨. ಸುಂದರನ ಸಾಹಸ (ನವಸಾಕ್ಷರರಿಗಾಗಿ ಕತೆ – ಹೆಗ್ಗೋಡಿನಲ್ಲಿ ಬರೆದದ್ದು – ಶಿವರಾಮ ಕಾರಂತರ ಮೆಚ್ಚುಗೆ ಪಡೆದು).

೧೩. ವಾಂತಿ (ಸಾಹಿತ್ಯಕ ಪ್ರಬಂಧಗಳು).

೧೪. ಧರಿನಾಡಿನ ಗಾದೆಗಳು (ಧರಿನಾಡಿನ ಸುಮಾರು ಸಾವಿರಕ್ಕೂ ಮೀರಿದ ಗಾದೆಗಳ ಸಂಕಲನ).

೧೫. ಧರಿನಾಡಿನ ಪದಕೋಶ.

೧೬. ಜಾನಪದ ಪ್ರಾಸಗಳು.

೧೭. ಸ್ವಾತಂತ್ರ್ಯ ಹೋರಾಟಗಾರರು (೪೦ ಜನರ ವ್ಯಕ್ತಿ ಚಿತ್ರಗಳು)

೧೮. ಹನಿ ಹನಿ ಹನಿ (ಹನಿಗವನಗಳು).

**ಇತರ ಸಂಪಾದನೆಗಳಲ್ಲಿಯ ಲೇಖನಗಳು:**

೧. ವಯಸ್ಕರ ಶಿಕ್ಷಣ ಗೀತೆಗಳು (ವಯಸ್ಕರ ಶಿಕ್ಷಣ ಇಲಾಖೆಯ ಪ್ರಕಟಣೆಯಲ್ಲಿ ಎರಡು ಗೀತೆಗಳು).

೨. ಕಾಯಕ ಪರಿಣಾಮಿ (ಚೆನ್ನಬಸವಪಟ್ಟದ್ದೇವರ ಸನ್ಮಾನ ಗ್ರಂಥದಲ್ಲಿ ಒಂದು ಕವನ)

೩. ಕೆ. ಶಾಂತಯ್ಯನವರ ಸನ್ಮಾನ ಗ್ರಂಥ ಚೈತನ್ಯ ಶ್ರಯಲ್ಲಿ ಲೇಖನ.

೪. ೯ ನೇ ವರ್ಗದ (ದ್ವಿತೀಯ ಭಾಷೆ ಕನ್ನಡ) ಪಠ್ಯ ಪುಸ್ತಕದಲ್ಲಿ ಮಳೆ ಕವನದ ಆಯ್ಕೆ ೨೦೦೩ ರಿಂದ.

೫. ಮುಕ್ತಿ ಮಂದಿರದ ಪೂಜ್ಯ ಶ್ರೀ ಶಿವಯೋಗಿ ಸ್ವಾಮಿಗಳ ರೌಪ್ಯ ಮಹೋತ್ಸವ ಸಂಚಿಕೆಯಲ್ಲಿ ಲೇಖನ.

೬. ಖಡ್ಕೆಯವರು ಸಂಪಾದಿಸಿದ ರಾಮಚಂದ್ರ ಎಂ.ಪಿ. ಗೌರವ ಗ್ರಂಥದಲ್ಲಿ ವ್ಯಕ್ತಿಚಿತ್ರ.

೭. ಕಸಾಪ ಬೆಂಗಳೂರು ಹೊರ ತಂದಿರುವ ಬೀದರ ಜಿಲ್ಲಾ ಕಥಾ ಸಂಕಲನದಲ್ಲಿ ಮಲ್ಲೇಶಿ ಕಾಕಾ ಎಂಬ ಕತೆಗಳು ಪ್ರಕಟಗೊಂಡಿವೆ.

೮. 'ವಚನ ಕ್ರಾಂತಿ' ದೈನಿಕದಲ್ಲಿ ಕತೆಗಳು ಪ್ರಕಟಗೊಂಡಿವೆ.

**ಸನ್ಮಾನ ಹಾಗೂ ಪ್ರಶಸ್ತಿಗಳು:**

೧. ಭಾಲ್ಕಿ ತಾಲೂಕಾ ಉತ್ತಮ ಹೈಸ್ಕೂಲ್ ಶಿಕ್ಷಕನಾಗಿ – ೧೯೮೮.

೨. ಜಿಲ್ಲಾ ಮಟ್ಟದಲ್ಲಿ ಉತ್ತಮ ರಂಗ ಸೇವೆಗಾಗಿ–೧೯೯೩.

೩. ಜಿಲ್ಲಾ ಮಟ್ಟದಲ್ಲಿ ಜಾನಪದ ಸೇವೆಗಾಗಿ – ೧೯೯೬.

೪. ಜಿಲ್ಲಾ ಮಟ್ಟದಲ್ಲಿ ಕನ್ನಡ ಸೇವೆಗಾಗಿ – ೧೯೯೬.

೫. ಚೆನ್ನಬಸವ ಪಟ್ಟದ್ದೇವರು ಕನ್ನಡ ಸಂಘದಿಂದ ಜಿಲ್ಲಾ ಮಟ್ಟದ ಉತ್ತಮ ಸಾಹಿತಿಯೆಂದು (೨೦೦೩ ರಲ್ಲಿ)

೬. ಕನ್ನಡ ಸಂಘ ಗ್ರಾಮೀಣ ಇಂಜನೀಯರಿಂಗ್ ಕಾಲೇಜು ಭಾಲ್ಕಿಯಿಂದ ಜಿಲ್ಲಾ ಮಟ್ಟದ ಉತ್ತಮ ಬರಹಗಾರರ ಬಳಗ ಗುಲಬರ್ಗಾದಿಂದ.

೭. ರಾಜ್ಯ ಮಟ್ಟದ ಕಾಯಕ ಸನ್ಮಾನ ಪ್ರಶಸ್ತಿ ೨೦೦೩ ನೇ ಸಾಲಿಗಾಗಿ ಉದಯೋನ್ಮುಖ ಯುವ ಬರಹಗಾರರ ಬಳಗ ಗುಲಬರ್ಗಾದಿಂದ.

೮. ೮ ನೇ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿ ೨೦೦೪ ನೇ ಇಸವಿಯಲ್ಲಿ.

೯. ದಿನಾಂಕಃ ೦೫-೦೬-೨೦೦೫ ರಂದು ದೇಶಾಂಶ ಹುಡಗಿ ಅಭಿನಂದನಾ ಸಮಿತಿ ಬೀದರ ವತಿಯಿಂದ "ಚೇತನ ಶಿಲ್ಪಿ ಕೃತಿ" ಸಮರ್ಪಣೆ ಹಾಗೂ ಸನ್ಮಾನ.

ವಿಳಾಸಃ
**ಶಾಂತಪ್ಪ ದೇವರಾಯ (ದೇಶಾಂಶ ಹುಡಗಿ)**
ಮ.ನಂ. ೨-೭೫೮ ಅಲ್ಲಮಪ್ರಭು ನಗರ
ಗೊರನಳ್ಳಿ ವಿಸ್ತರಣೆ, ಬೀದರ-೫೮೫ ೪೦೩.

ನಾನು ಸೋತು ಗೆದ್ದವನು
ಗೆದ್ದು ಸೋತವನು
ನನಗೆ ಮಾನ ಸನ್ಮಾನ ಅವಮಾನಗಳು
ಕದಲಿಸಲಾರವೆಂದ ದಿಗಂಬರ ಕರಿಬಸವೇಶ್ವರ!

**- ದೇಶಾಂಶ ಹುಡಗಿ**

೧೫-೦೫-೨೦೦೫



ಧರ್ಮಪತ್ನಿಯೊಂದಿಗೆ ದೇಶಾಂಶ ಹುಡುಗಿ



ಸಹಪಾರಿವಾರದೊಂದಿಗೆ ದೇಶಾಂಶ ಹುಡುಗಿ



ಸಂದರ್ಶನದ ಜೊತೆಗೆ ದೇಶಾಂಶ ಹುಡುಗಿ




ಧರಿನಾಡು ಸಂಘ ಸದಸ್ಯರೊಂದಿಗೆ ದೇಶಾಂಶ ಹುಡುಗಿ

## ಅನುಬಂಧ–೧

# ಗ್ರಂಥ ಋಣ


| | | | |
|---|---|---|---|
| 1 | ಅನಂತ ನಾರಾಯಣ ಎಸ್. | ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ ಕಾವ್ಯದ ಪ್ರಭಾವ | ೧೯೭೬ |
| 2 | ಅನಂತ ಮೂರ್ತಿ ಯು.ಆರ್. | ಪ್ರಜ್ಞೆ ಮತ್ತು ಪರಿಸರ. | ೧೯೭೧ |
| 3 | ಉತ್ತಂಗಿ ಚನ್ನಪ್ಪ | ಸರ್ವಜ್ಞನ ವಚನಗಳು | ೧೯೯೯ |
| 4 | ಶಿವರಾಮ ಕಾರಂತ | ವಿಚಾರ ಸಾಹಿತ್ಯ ನಿರ್ಮಾಣ | ೧೯೯೮ |
| 5 | ಪ್ರಭು ಖಾನಾಪುರೆ | ಶಾಂತಾ ಶ್ರೀ | ೧೯೯೯ |
| 6 | ಡಾ. ಚಿದಾನಂದ ಮೂರ್ತಿ ಎಂ. | ವಚನ ಸಾಹಿತ್ಯ–೫ | ೧೯೭೫ |
| 7 | ಡಾ. ಎಚ್. ತಿಪ್ಪೇರುದ್ರಸ್ವಾಮಿ | ತೌಲನಿಕ ಕಾವ್ಯ ಮೀಮಾಂಸೆ | ೧೯೮೫ |
| 8 | ರಮಜಾನ ದರ್ಗಾ | ಸಾಹಿತ್ಯ ಮತ್ತು ಸಮಾಜ | ೧೯೮೨ |
| 9 | ನುಗಡೋಣಿ ಅಮರೇಶ | ಹೈದ್ರಾಬಾದ ಕರ್ನಾಟಕ ಹಾಡು–ಪಾಡು | ೨೦೦೩ |
| 10 | ಗವಿಸಿದ್ದಪ್ಪ ಪಾಟೀಲ | ಪುರಸ್ಕೃತ ಕೃತಿಗಳ ಸಮೀಕ್ಷೆ | ೨೦೦೫ |
| 11 | ಡಾ. ಜಗನ್ನಾಥ ಹೆಬ್ಬಾಳೆ | ಬೀದರ ಜಿಲ್ಲಾ ದರ್ಶನ | |
| 12 | ಡಾ. ಮಲ್ಲೇಪುರಂ ಜಿ. ವೆಂಕಟೇಶ | ಸಾಹಿತ್ಯ ವಿಮರ್ಶೆ | ೧೯೯೮ |
| 13 | ಡಾ. ಸೋಮನಾಥ ಯಳವಾರ<br>ಡಾ. ಪ್ರೇಮಾ ಸಿರ್ಸೆ | ಬೀದರ ಜಿಲ್ಲಾ ದರ್ಶನ | ೨೦೦೫ |
| 14 | ಡಾ. ಸೋಮನಾಥ ಯಳವಾರ | ಬೀದರ ಜಿಲ್ಲೆಯ ಶರಣ ಸ್ಮಾರಕಗಳು | ೨೦೦೬ |
| 15 | ದೇಶಾಂಶ ಹುಡಗಿ | ಗ್ರಾಮ ಶಿಲ್ಪಿಗಳು | ೧೯೮೦ |
| 16 | ದೇಶಾಂಶ ಹುಡಗಿ | ಬದುಕಿನ ಸುತ್ತ | ೧೯೮೮ |
| 17 | ದೇಶಾಂಶ ಹುಡಗಿ | ಅಕ್ಷರ ಜ್ಯೋತಿ | ೧೯೯೩ |
| 18 | ದೇಶಾಂಶ ಹುಡಗಿ | (ಅನುವಾದ) ಮಹಾತ್ಮ ಬಸವೇಶ್ವರರು | ೧೯೯೩ |
| 19 | ದೇಶಾಂಶ ಹುಡಗಿ | ನಾ ಕಂಡ ನನ್ನವರು | ೧೯೯೫ |
| 20 | ದೇಶಾಂಶ ಹುಡಗಿ | ಬೀದರ ಜಿಲ್ಲೆಯ ಬರಹಗಾರರು | ೧೯೯೮ |

| | | | |
|---|---|---|---|
| 21 | ದೇಶಾಂಶ ಹುಡಗಿ | ಸಂ. ಸಿದ್ಧರಾಮೇಶ್ವರ ವಚನಗಳು | ೧೯೯೮ |
| 22 | ದೇಶಾಂಶ ಹುಡಗಿ | ಬೀದರ ಜಿಲ್ಲೆಯ ತತ್ವ ಪದಕಾರರು | ೧೯೯೮ |
| 23 | ದೇಶಾಂಶ ಹುಡಗಿ | ಸಂ. ಧರಿನಾಡು ಕಾವ್ಯ | ೨೦೦೧ |
| 24 | ದೇಶಾಂಶ ಹುಡಗಿ | ಸಂ. ಬಸವ ಶಿಶು | ೨೦೦೩ |
| 25 | ದೇಶಾಂಶ ಹುಡಗಿ | ಸಂ. ಗುರುಪುತ್ರ | ೨೦೦೩ |
| 26 | ದೇಶಾಂಶ ಹುಡಗಿ | ಸಂ. ಕಾವ್ಯ ಕಾರಂಜಿ | ೨೦೦೩ |
| 27 | ದೇಶಾಂಶ ಹುಡಗಿ | ಧರಿನಾಡಿನ ಜಾನಪದ ಗೀತೆಗಳು | ೨೦೦೫ |
| 28 | ದೇಶಾಂಶ ಹುಡಗಿ | ದಿಗಂಬರ ವಚನಗಳು | ೨೦೦೬ |
| 29 | ದೇಶಾಂಶ ಹುಡಗಿ | ಸಂ. ಕನ್ನಡದ ದೀಪ | ೨೦೦೬ |
| 30 | ದೇಶಾಂಶ ಹುಡಗಿ | ಸಂ. ಸ್ನೇಹ ಜೀವಿ | ೨೦೦೬ |
| 31 | ದೇಶಾಂಶ ಹುಡಗಿ | ಮಾಸ್ತರನ ಮನೆ (ಸಣ್ಣ ಕಥೆಗಳು) | ೨೦೦೭ |
| 32 | ಹಂಸಕವಿ ಹಾಗೂ ರಘು ಶಂಭು ಭಾತಂಬ್ರಾ, ಸೋಮನಾಥ ಯಳವಾರ | ಚೇತನ ಶಿಲ್ಪಿ | ೨೦೦೫ |
| 33 | ಡಾ. ಸೋಮನಾಥ ಯಳವಾರ | ಪುಲಿಗೆರೆಯ ಆದಯ್ಯ | ೨೦೦೫ |
| 34 | ಡಾ. ಸೋಮನಾಥ ಯಳವಾರ | ಶರಣ ಸಿರಿ | ೨೦೦೭ |
| 35 | ಶಾಂತರಸ | ಕಾಯಕ ಪರಿಣಾಮಿ | ೧೯೯೧ |
| 36 | ಜಿ.ಎಸ್. ಶಿವರುದ್ರಪ್ಪಾ | ಕಾವ್ಯಾರ್ಥ ಚಿಂತನ | ೧೯೮೮ |
| 37 | ಜಿ.ಎಸ್. ಶಿವರುದ್ರಪ್ಪಾ | ಕಾವ್ಯ ಸಂವಾದ | ೨೦೦೫ |
| 38 | ಜಿ.ಎಸ್. ಶಿವರುದ್ರಪ್ಪಾ | ಕನ್ನಡ ಸಾಹಿತ್ಯ ಸಂದರ್ಭ | ೧೯೯೦ |
| 39 | ಸಬರದ ವಿಜಯಶ್ರೀ | ವಿಚಾರ ಸಾಹಿತ್ಯ | ೨೦೦೦ |
| 40 | ಪ್ರೇಮಾ ಸಿರ್ಸೆ | ಹಮಹಿಳೆ ಸಮಾಜ ಮತ್ತು ಸವಾಲುಗಳು. | ೨೦೦೬. |